# ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ

ಸಮಾಜಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ


ಸಂಶೋಧಕ

ಬಸವರಾಜ ಎಸ್ ಹಿರೇಮಠ

ಮಾರ್ಗದರ್ಶಕರು

ಡಾ ಕೆ ಎಂ ಮೈತ್ರಿ







ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೦೩

# ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ

ಸಮಾಜಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ

ಸಂಶೋಧಕ

ಬಸವರಾಜ ಎಚ್ ಹಿರೇಮಠ

ಮಾರ್ಗದರ್ಶಕರು

ಡಾ ಕೆ ಎಂ ಮೈತ್ರಿ



ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬



# ದೃಢೀಕರಣ ಪತ್ರ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ನಿಬಂಧವನ್ನು ಶ್ರೀ ಬಸವರಾಜ ಎಸ್ ಹಿರೇಮಠ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 20.8.02
ಸ್ಥಳ : ವಿದ್ಯಾರಣ್ಯ

(ಡಾ ಕೆ ಎಂ ಮೈತ್ರಿ)
ಮುಖ್ಯಸ್ಥರು ಮತ್ತು ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪ್ರಮಾಣ ಪತ್ರ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ನಿಬಂಧವನ್ನು ಸಮಾಜಶಾಸ್ತ್ರದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೨-೦೩ನೇ ಶೈಕ್ಷಣಿಕ ಸಾಲಿನಲ್ಲಿ ಡಾ ಕೆ ಎಂ ಮೈತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 20-04-2002
ಸ್ಥಳ : ವಿದ್ಯಾರಣ್ಯ

(ಬಸವರಾಜ ಎಸ್ ಹಿರೇಮಠ)
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಪರಿಶಿಷ್ಟಗಳು

# ಗುಲ್ಬರ್ಗಾ ಜಿಲ್ಲೆಯ ಭೂಪಟ



# ೧. ಅಧ್ಯಯನದ ಮಹತ್ವ ಮತ್ತು ಉದ್ದೇಶ

## ೧. ಪೀಠಿಕೆ

ಬೇಟೆ ಪಶುಪಾಲನೆ ಕೃಷಿ ಹಂತಗಳು ಮಾನವನ ವಿಕಸನದ ಮಜಲುಗಳು, ಸಮಾಜ ಬದಲಾವಣೆಯಾದಂತೆ ತಮ್ಮ ಅನುಕೂಲತೆಗಳಿಗಾಗಿ ಸಾಮಗ್ರಿಗಳನ್ನು ತಯಾರಿಸುವ ಕುಶಲಕರ್ಮಿ ಜನ ಸಮುದಾಯಗಳು ಹುಟ್ಟಿಕೊಂಡವು. ಕುಶಲಕರ್ಮಿ ಸಮುದಾಯಗಳಲ್ಲಿಯೇ ಬೈಲುಪತ್ತಾರ ಸಮುದಾಯವು ತನ್ನದೆಯಾದಂತಹ ವಿಶಿಷ್ಟ ಸ್ವರೂಪ ಹೊಂದಿರುತ್ತದೆ. ಈ ಸಮುದಾಯವು ಅಲೆಮಾರಿ ಜೀವನ ನಡೆಸುವದರೊಂದಿಗೆ ತನ್ನೊಂದಿಗೆ ಇಂದಿಗೂ ಜೀವಂತವಾಗಿ ತನ್ನದೆಯಾದಂತಹ ವಿಶಿಷ್ಟ ಭಾಷೆ ಮತ್ತು ಸಂಸ್ಕೃತಿಗಳನ್ನು ಹೊಂದಿರುತ್ತದೆ. ತಾಮ್ರ, ಬೆಳ್ಳಿ, ಕಲ್ಲುಬೆಳ್ಳಿ, ಹಿತ್ತಾಳೆಗಳಿಂದ ಆಭರಣಗಳನ್ನು ತಯಾರಿಸಿ ಜಾತ್ರೆ-ಸಂತೆ, ರೈಲ್ವೆನಿಲ್ದಾಣ, ಬಸ್‌ನಿಲ್ದಾಣಗಳಲ್ಲಿ ಮಾರಾಟ ಮಾಡುತ್ತಾ ಈ ಸಮುದಾಯದವರು ಜೀವನ ಸಾಗಿಸುವುದು ಕಂಡುಬರುತ್ತದೆ. ಅಲ್ಲದೆ ವಿವಿಧ ಗ್ರಾಮಗಳಿಗೆ ಹೋಗಿ ಮಾರಾಟ ಮಾಡುತ್ತಾ ಅಲೆಮಾರಿ ಜೀವನ ನಡೆಸುವುದು ಕಂಡು ಬರುತ್ತದೆ. ತೀರಾ ಇತ್ತೀಚಿನ ದಿನಗಳಲ್ಲಿ ಇವರು ನಗರದ ಕೊಳಚೆ ಪ್ರದೇಶಗಳಲ್ಲಿ ಮತ್ತು ಗ್ರಾಮೀಣ ಪ್ರದೇಶದ ಕೆಳಜಾತಿ ಸಮುದಾಯಗಳು ವಾಸಿಸುವ ಕೇರಿಗಳಲ್ಲಿ ನೆಲೆ ನಿಂತುಕೊಳ್ಳುತ್ತಿರುವುದು ಕಂಡು ಬರುತ್ತದೆ.

ಕುಶಲಕರ್ಮಿ ಸಮುದಾಯಗಳ ಕುರಿತು ಇದುವರೆಗಿನ ಅಧ್ಯಯನಗಳು ಪ್ರಾಚೀನ ಸಿಂಧೂ ಸಂಸ್ಕೃತಿಯ ನಗರಗಳಾದ ಹರಪ್ಪ ಮತ್ತು ಮೊಹಂಜೋದಾರೋ ಭೂ ಉತ್ಖನನದಲ್ಲಿ ಕೂಡಾ ಕುಶಲಕರ್ಮಿ ಆಧಾರಿತ ಜೀವನದ ಕುರುವುಗಳು ದೊರೆತಿರುವುದು ತಿಳಿದು ಬರುತ್ತದೆ. ಬಹುಶಃ ಇಡೀ ದಕ್ಷಿಣ ಏಷಿಯಾಕ್ಕೆ ಸಂಬಂಧಿಸಿದಂತೆ, ಕುಶಲಕರ್ಮಿ ಸಮುದಾಯಗಳನ್ನು ಕುರಿತು ಪ್ರಥಮವಾಗಿ ಮಾಹಿತಿ ನೀಡುವ ಪುಸ್ತಕ ನಾಕ್ಸ್ "KNOXE" ರವರ "ಹಿಸ್ಟಾರಿಕಲ್ ರಿಲೇಶನ್ ಆಫ್ ದ ಐಲ್ಯಾಂಡ್ ಸಿಲೋನ್" ಎಂದು ಕುಮಾರ್ ಸ್ವಾಮಿಯವರು ಅಭಿಪ್ರಾಯ ಪಡುತ್ತಾರೆ. ಈ ಕೃತಿಯ ನಂತರ ಅಬೆ ದುಬೆರವರ "ಹಿಂದೂ ಮ್ಯಾನರ್ಸ್ ಕಸ್ಟಮ್ಸ್ ಆಂಡ್ ಸೆರೆಮೊನೀಸ್", ಬುಕನಾನರವರ "ಜರ್ನಿ ಫ್ರಮ್ ಮದ್ರಾಸ್ ಥ್ರೊ ದಿ ಕಂಟ್ರೀಸ್ ಆಫ್ ಮೈಸೂರು, ಕೆನಾರಾ ಅಂಡ್ ಮಲಬಾರ್." ಇವರ ನಂತರ ಅಕ್ಕಸಾಲಿಗರನ್ನು ಕುರಿತು ವಿಶೇಷವಾಗಿ ಅಧ್ಯಯನ ಮಾಡಿದವರು ಈಶ್ವರನ್, ದಕ್ಷಿಣ ಕರ್ನಾಟಕದ ವಿಶ್ವಕರ್ಮರನ್ನು ಕುರಿತು ವಿಶೇಷವಾಗಿ ಅಧ್ಯಯನ ಮಾಡಿದವರು ಶ್ರೀನಿವಾಸರವರು, ಅಲ್ಲದೆ ಮಾನವಶಾಸ್ತ್ರದ

ವಿದ್ವಾಂಸರಾದ ಜಾನ್ ಬ್ರೊವರವರು "Maker's of the world" ಎಂಬ ಗ್ರಂಥದಲ್ಲಿ ಕುಶಲಕರ್ಮಿ ಸಮುದಾಯಗಳ ಕುರಿತು ಮಾಹಿತಿ ನೀಡಿರುತ್ತಾರೆ. ಆದರೆ ಭಾರತೀಯ ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ಬ್ರಿಟೀಷರ ವಸಹಾತುಶಾಹಿ ಕಾಲದಲ್ಲಿ ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರಿ ಅವರು "Castes and Tribes of Southern India" ಎಂಬ ೭ ಸಂಪುಟ ಗ್ರಂಥಗಳ ಮೂಲಕ ಪರಿಚಯಿಸಿದ್ದಾರೆ. ನಂತರ ಕರ್ನಾಟಕದ ಜಾತಿ ಮತ್ತು ಬುಡಕಟ್ಟುಗಳನ್ನು ಕುರಿತು ೧೯೩೫ರಲ್ಲಿ ಎಲ್.ಕೆ. ಅನಂತ ಕೃಷ್ಣ ಅಯ್ಯರ್‌ರವರು "The Mysore Tribes and Castes" ಎಂಬ ೪ ಸಂಪುಟ ಗ್ರಂಥಗಳ ಮೂಲಕ ಪರಿಚಯಿಸಿದ್ದಾರೆ. ಕೆ.ಎಸ್. ಸಿಂಗ್‌ರವರು "Indias Communities" ಎಂಬ ಗ್ರಂಥದಲ್ಲಿ ಬೈಲುಪತ್ತಾರರನ್ನು ಕುರಿತು ಪರಿಚಯಾತ್ಮಕ ಮಾಹಿತಿ ನೀಡಿದ್ದಾರೆ. ಇತ್ತೀಚಿಗೆ "ಕರ್ನಾಟಕದ ಮುದ್ದೆ ಕಂಬಾರ"ರನ್ನು ಕುರಿತು ಡಾ. ಬಿ.ಆರ್.ಕುಮಾರ್ ರವರು ಪಿಎಚ್.ಡಿ. ಅಧ್ಯಯನ ಮಾಡಿರುವರು.

ಆದರೆ ಇಲ್ಲಿಯವರೆಗೂ ನಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ ಒಟ್ಟಾರೆಯಾಗಿ ಬೈಲುಪತ್ತಾರರನ್ನು ಕುರಿತು ಸಮಗ್ರ ಅಧ್ಯಯನ ನಡೆಯದೇ ಇರುವುದು ತಿಳಿದು ಬರುತ್ತದೆ. ಆದ್ದುದರಿಂದ ಬೈಲುಪತ್ತಾರರ ಕುರಿತು ಇಲ್ಲಿ ಅಧ್ಯಯನ ನಡೆಸಲಾಗಿದೆ.

## ಅಧ್ಯಯನದ ಮಹತ್ವ

ಬೈಲುಪತ್ತಾರರ ಸಮುದಾಯವನ್ನು ಕುರಿತು ಪರಿಚಯಾತ್ಮಕ ಮಾಹಿತಿಗಳು ಮಾತ್ರ ಗ್ರಂಥಗಳಲ್ಲಿ ಅಥವಾ ಗೆಜೆಟ್‌ಗಳಲ್ಲಿ ಗುರುತಿಸಲಾಗಿದೆ. ಆದರೆ ಭಾರತದ ಬಹುತೇಕ ಜಾತಿಗಳಂತೆ ಈ ಸಮುದಾಯವು ನಿರ್ಲಕ್ಷಿಸಲ್ಪಟ್ಟ ಸಮುದಾಯವಾಗಿದೆ. ಹಾಗೂ ಇಲ್ಲಿಯವರೆಗೆ ಈ ಸಮುದಾಯವನ್ನು ಕುರಿತು ಯಾವುದೇ ರೀತಿಯ ಅಧ್ಯಯನ ನಡೆದಿರುವುದಿಲ್ಲ. ಎಲೆಮರಿ ಕಾಯಿಯಂತೆ ಧ್ವನಿ ಇಲ್ಲದೆ, ಈ ಸಮುದಾಯ ಗೊತ್ತಿದ್ದರೂ ಗೊತ್ತಿಲದಂತೆ ನಗಣ್ಯವಾಗಿರುವುದರಿಂದ ಈ ಸಮುದಾಯದ ಅಧ್ಯಯನದ ಅವಶ್ಯಕತೆ ತುಂಬಾ ಇದೆ. ಈ ಸಮುದಾಯವು ಮೂಲತಃ ಬುಡಕಟ್ಟು ಸಮುದಾಯವಾಗಿದ್ದು ಮಾನವಶಾಸ್ತ್ರದ ಧೃಷ್ಟಿಯಿಂದ ಒಂದು ಬುಡಕಟ್ಟು. ಆದರೆ ಸರ್ಕಾರದ ಮತ್ತು ವಿದ್ವಾಂಸರ ನಿರ್ಲಕ್ಷ್ಯದಿಂದ ಈ ಸಮುದಾಯವು "ಪರಿಶಿಷ್ಟ ಬುಡಕಟ್ಟು" ಎಂದು ಪರಿಗಣಿಸಲ್ಪಟ್ಟಿಲ್ಲ. "ಸರಕಾರ ಮಾಡಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ವರ್ಗೀಕರಣ ವೈಜ್ಞಾನಿಕವಾಗಿರದೆ ರಾಜಕೀಯವಾಗಿದೆ." ಎಂದು ಬಹುತೇಕ ಅಧ್ಯಯನಕಾರರು ತಿಳಿಸುತ್ತಾರೆ. ಹೀಗಾಗಿ ತೀರಾ ಸಂಕಷ್ಟದಲ್ಲಿ ಜೀವನ ನಡೆಸುತ್ತಿರುವ ಈ ಸಮುದಾಯದ ಪರಿಚಯ ಸಂಶೋಧಕರಿಂದ ನಡೆಯಬೇಕಾಗಿದೆ. ಅಲ್ಲದೆ ಸರಕಾರದ ಗಮನಕ್ಕೆ ಇಂತಹ ಸಮುದಾಯಗಳ ಶೋಧದ ಫಲಿತಗಳನ್ನು ನೀಡುವುದು ಅಗತ್ಯವಾಗಿದೆ. ಈ ಕುರಿತು ಒಂದು ಸಮಾಜಶಾಸ್ತ್ರೀಯ ಅಧ್ಯಯನದ ಅವಶ್ಯಕತೆಯಿದೆ.

## ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಉತ್ತರ ಭಾಗದಲ್ಲಿರುವ ಗುಲ್ಬರ್ಗಾ ಜಿಲ್ಲೆಯೂ ಕರ್ನಾಟಕದಲ್ಲಿಯೇ ಅತ್ಯಂತ ಹೆಚ್ಚಿನ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲೆಯಾಗಿದೆ. ಪ್ರಸ್ತುತ ಬೈಲುಪತ್ತಾರ ಸಮುದಾಯದ ಸಮಗ್ರ ಅಧ್ಯಯನವು ಗುಲ್ಬರ್ಗಾ ಜಿಲ್ಲೆ ಒಳಗೊಂಡಂತೆ ಎಲ್ಲಾ ೧೦ ತಾಲೂಕುಗಳು ಹಾಗೂ ಸಮುದಾಯ ನೆಲೆಸಿರುವ ಗ್ರಾಮೀಣ ಪ್ರದೇಶಗಳು ಅಧ್ಯಯನ ವ್ಯಾಪ್ತಿಯನ್ನು ಹೊಂದಿರುತ್ತದೆ.

## ಗುಲ್ಬರ್ಗಾ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ

ಕಲಬುರ್ಗಿ ಜಿಲ್ಲೆಯು ೧೬,೨೨೪ ಚ. ಕಿಮೀ. ವಿಸ್ತೀರ್ಣಹೊಂದಿದೆ. ೧,೩೦೪ ಗ್ರಾಮಗಳು, ೧೨ ಪಟ್ಟಣಗಳು ೧೦ ತಾಲೂಕುಗಳಲ್ಲಿ ವಿಭಾಗಿಸಲ್ಪಟ್ಟಿದೆ. ಈ ಜಿಲ್ಲೆಯು ಕಡಿಮೆ ಮಳೆ ಬೀಳುವ ಪ್ರದೇಶವಾಗಿದೆ. ರಾಜ್ಯದ ಒಟ್ಟು ನೀರಾವರಿ ಪ್ರದೇಶದ ಶೇಕಡ ೨.೧೧ ಹೆಕ್ಟೇರ್ ಜಮೀನು ಮಾತ್ರ ನೀರಾವರಿಗೆ ಒಳಪಟ್ಟಿದೆ. ಇಲ್ಲಿನ ಒಕ್ಕಲುತನ ಬಹುತೇಕ ಮಳೆಯನ್ನೇ ಅವಲಂಬಿಸಿರುವುದರಿಂದ ಮೇಲಿಂದ ಮೇಲೆ ಭೀಕರ ಬರಗಾಲಗಳಿಗೆ ತುತ್ತಾಗುತ್ತ ಇರುತ್ತದೆ. ಈ ಪ್ರದೇಶದಲ್ಲಿ ಹರಿಯುವ ಕೃಷ್ಣ ಭೀಮಾ ನದಿಗಳಿಂದಲೂ, ಮುಲ್ಲಾಮರಿ, ಅಮರ್ಜಾ, ಕಾಗಿಣಾ, ಬೆಣ್ಣೆತೋರಾ ಮುಂತಾದ ಚಿಕ್ಕ ತೊರೆಗಳಿಂದಲೂ ಯಾವುದೇ ಲಾಭವಾಗಿಲ್ಲ.

ಗುಲ್ಬರ್ಗಾ ಜಿಲ್ಲೆಯ ಉತ್ತರಕ್ಕೆ ಬೀದರ ಹಾಗೂ ದಕ್ಷಿಣಕ್ಕೆ ರಾಯಚೂರು ಜಿಲ್ಲೆಗಳಿವೆ. ಪಶ್ಚಿಮದ ಆಳಂದ, ಅಫಜಲಪೂರ್ ತಾಲೂಕುಗಳಿಗೆ ಮಹಾರಾಷ್ಟ್ರದ ಸೋಲಾಪೂರ ಜಿಲ್ಲೆಯ ಉಮರ್ಗಾ, ಸೋಲಾಪೂರ, ಅಕ್ಕಲಕೋಟ ತಾಲೂಕುಗಳ ಭಾಗಗಳು ಹತ್ತಿಕೊಂಡಿವೆ. ಆದರೆ ಈ ಭಾಗಗಳು ಕನ್ನಡದ ಪ್ರಭಾವವುಳ್ಳ ಭಾಗಗಳೇ ಆದುದರಿಂದ, ಮರಾಠಿಗರ ಹೆಚ್ಚಿನ ಪ್ರಭಾವದ ಭಾಗವಾಗಿ ಹೊಂದಿದ್ದರೂ, ಮರಾಠಿಗರ ಪ್ರಭಾವವೇನೂ ಕಾಣಿಸುವುದಿಲ್ಲ. ಆದರೆ ಪೂರ್ವದ ಚಿಂಚಚೋಳಿ, ಸೇಡಂ ಹಾಗೂ ಯಾದಗಿರಿ ತಾಲೂಕುಗಳಿಗೆ ಆಂಧ್ರ ಪ್ರದೇಶದ ತಾಂಡೂರ್, ಕೊಡಂಗಲ್, ನಾರಾಯಣ ಪೇಟ ಭಾಗಗಳು ಹತ್ತಿಕೊಂಡಿದ್ದು. ಇಲ್ಲಿ ತೆಲುಗಿನ ಗಾಢ ಪ್ರಭಾವ ಎದ್ದು ಕಾಣಿಸುತ್ತದೆ. ರಾಷ್ಟ್ರಕೂಟ ಸಾಮ್ರಾಜ್ಯ ತಲೆಯೆತ್ತಿ ಮರೆದುದು ಈ ಜಿಲ್ಲೆಯಲ್ಲಿಯೇ ಎಂಬುದು ಅಭಿಮಾನದ ಸಂಗತಿ. ಕೇವಲ ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟುವದಷ್ಟೇ ಅಲ್ಲದೆ ಪ್ರಜಾ ಜೀವನದಲ್ಲಿ ಸುಸ್ಥಿರ ಶಾಂತಿ ಸುಭಿಕ್ಷುಗಳು ನೆಲಸಿ ನಿಲ್ಲುವ ಆಡಳಿತ ಕ್ರಮವನ್ನು ಇವರು ರೂಪಿಸಿಕೊಂಡ ಬಗೆಗೆ ಇಲ್ಲಿನ ಶಾಸನಗಳು ಬೆಳಕು ಚೆಲ್ಲುತ್ತವೆ. ಚಾಲುಕ್ಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಅಲಂದೆ ಶಾಸನದಲ್ಲಿ "ಕೃತಯುಗ ಮಾದುದು ಕಲಿ ಯುಗಂ ಅತಿ ಧಾರ್ಮಿಕವಾಯ್ತು ವಿಕ್ರಮಾದಿತ್ಯ ನೃಪಂ ಪ್ರತಿ ತಾಳಿಪ ರಾಷ್ಟ್ರಂ" ಎಂದು ವರ್ಣಿತವಾಗಿದೆ. ನಾಗಾಯಿಯಂತಹ ಪ್ರಸಿದ್ಧ ವಿದ್ಯಾಕೇಂದ್ರ, ಬೌದ್ಧ, ಜೈನ, ವೀರಶೈವ ಧರ್ಮಗಳ ಸಮನ್ವಯ ಪೋಷಣೆ, ಸಹಬಾಳ್ವೆಯ ತತ್ವಗಳು ವಿತಾಕ್ಷರೀ ಗ್ರಂಥದಿಂದ ನ್ಯಾಯಲೋಕದಲ್ಲಿ ಸುಪ್ರಸಿದ್ಧವಾದ ವಿಜ್ಞಾನೇಶ್ವರ

ಪಂಡಿತನ ನೆಲೆವೀಡು, ಧಾರ್ಮಿಕ ಪುರುಷರ ಸ್ಥಳಗಳು, ಶಿಲ್ಪ ಸೌಂದರ್ಯದ ತವರು ಮನೆಯಾದ ಕಾಳಿಗೆ, ಮಣೂರು, ಹೊಡಲು, ಶಿರವಾಳ, ಏವೂರು, ಕುಳುಗೇರಿಗಳಲ್ಲಿನ ದೇವಾಲಯಗಳು, ಚಿನಮಳ್ಳಿ ಅಲ್ಲದೆ ಮುದನೂರಿನ ತೀರ್ಥ ಕ್ಷೇತ್ರಗಳು ಕಲಬುರ್ಗಿ ನಾಡಿನಲ್ಲಿವೆ. ಒಟ್ಟೊಂದರಲ್ಲಿ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಸಾಹಿತ್ಯಿಕ ಭವ್ಯ ಪರಂಪರೆಯಿಂದ ಕೂಡಿದ ಹಲವಾರು ಜಾತಿ, ಪಂಥ, ಧರ್ಮ, ಮತಗಳು, ವಿವಿಧ ರೀತಿಯ ವೃತ್ತಿ ಮತ್ತು ಒಕ್ಕುಲತನ ಜೀವನ ನಡೆಸುವ ಜನರು ಕೂಡಿದ್ದು ಕರ್ನಾಟಕದ ಚರಿತ್ರೆಗೆ ಗುಲ್ಬರ್ಗಾ ಜಿಲ್ಲೆಯು ಶತಮಾನಗಳಿಂದಲೂ ತನ್ನ ಕಾಣಿಕೆ ಸಲ್ಲಿಸಿರುವುದಕ್ಕೆ ಇಲ್ಲಿನ ಶಿಲಾಶಾಸನಗಳ ಜೀವಂತ ಸಾಕ್ಷಿಯಾಗಿವೆ. ಗುಲ್ಬರ್ಗಾ ಜಿಲ್ಲೆಯ ಜನರು ಸೌಂದರ್ಯ ಪ್ರಿಯರು. ಇವರು ಕಡಿಮೆ ಖರ್ಚಿನಲ್ಲಿ ಆಭರಣಗಳನ್ನು ಖರೀದಿಸಿ ಬಳಸುವರು. ಬಹುಸಂಖ್ಯಾತರು ಕೃಷಿಯನ್ನು ಅವಲಂಬಿಸಿದ್ದು ಗ್ರಾಮೀಣ ಹಿನ್ನೆಲೆಯವರಾಗಿರುವುದರಿಂದ ಬೈಲುಪತ್ತಾರರಂತಹ ಕುಶಲಕರ್ಮಿಗಳ ಬದುಕಿಗೆ ಹೆಚ್ಚಿನ ಅವಕಾಶಗಳುಂಟು. ಬೈಲುಪತ್ತಾರರು ತಯಾರಿಸುವ ಬೆಳ್ಳಿ ಮತ್ತು ಹಿತ್ತಾಳೆಯ ಉಂಗುರು, ಹಾಲಕಡಗ, ಓಲೆ, ಡಾಬು, ಸರ, ಚಿಮಟಿಗೆ, ಹಲ್ಲುಕಡ್ಡಿ, ತಾಯತ ಇತ್ಯಾದಿಗಳಿಗೆ ಗ್ರಾಮೀಣ ಮತ್ತು ನಗರಪ್ರದೇಶಗಳಲ್ಲಿ ಬೇಡಿಕೆ ಇರುವುದರಿಂದ ಈ ಸಮುದಾಯ ಈ ಪ್ರದೇಶಗದಳಲ್ಲಿ ನಿರಂತರವಾಗಿ ಅಲೆದಾಡುತ್ತಿರುತ್ತದೆ.

### ಅಧ್ಯಯನದ ಉದ್ದೇಶಗಳು

೧. ಬೈಲುಪತ್ತಾರರ ಮೂಲ ಮತ್ತು ಪ್ರಸಾರವನ್ನು ಗುರುತ್ತಿಸುವುದು

೨. ಸಮುದಾಯದ ಸಾಮಾಜೀಕ, ಆರ್ಥಿಕ, ಕೌಟುಂಬಿಕ ಜೀವನ ವಿಧಾನಗಳನ್ನು ಅಧ್ಯಯನಿಸುವುದು.

೩. ಸಮುದಾಯದ ಸಾಂಸ್ಕೃತಿ ಜೀವನ ಶೋಧಿಸುವುದು

೪. ಸಮುದಾಯದ ಭಾಷೆಯನ್ನು ಶೋಧಿಸುವುದು

೫. ಸಮುದಾಯದ ಆಧುನಿಕ ಸಂದರ್ಭದಲ್ಲಿಯ ಸ್ಥಿತಿಗತಿಗಳನ್ನು ಅಧ್ಯಯನಿಸುವುದು

೬. ಇವರ ಶಿಕ್ಷಣ, ಸಂಘಟನೆ ಮತ್ತು ಅಭಿವೃದ್ಧಿಯನ್ನು ಅಧ್ಯಯನಿಸುವುದು.

೭. ಇವರ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ನೀಡುವುದು.

### ಊಹೆಗಳು

೧. ಬೈಲುಪತ್ತಾರ ಸಮುದಾಯವು ಮೂಲತಃ ಅಲೆಮಾರಿಗಳಾಗಿದ್ದು ನೆಲೆ ನಿಲ್ಲುವ ಪ್ರಯತ್ನದಲ್ಲಿರುವುದು.

೨. ಈ ಸಮುದಾಯವು ತನ್ನ ಪರಂಪರಾಗತ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುವುದರಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವುದು.

## ಅಧ್ಯಯನದ ವಿಧಾನ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದೆ. ಬೈಲುಪತ್ತಾರರ ಪ್ರತಿ ಕುಟುಂಬದ ಕೌಟುಂಬಿಕ ಹಾಗೂ ವೈಯಕ್ತಿಕ ಮಾಹಿತಿಗಳನ್ನು ಮಾದರಿ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಸಂಗ್ರಹಿಸಲಾಗಿದೆ. ಆಯ್ದ ಅನುಭವಿ ವಕ್ತೃಗಳಿಂದ ಬೈಲುಪತ್ತಾರರ ವಿಸ್ತೃತ ಮಾಹಿತಿಗಳನ್ನು ಕಲೆಹಾಕಲಾಗಿದೆ. ಹಲವಾರು ಛಾಯಾಚಿತ್ರವನ್ನು ಪಡೆದು ವಿಷಯಕ್ಕೆ ನ್ಯಾಯ ಒದಗಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ತೌಲನಿಕ, ಐತಿಹಾಸಿಕ, ಸಂದರ್ಶನ, ವಿಷಯ ಅಧ್ಯಯನ, ಅಂಕಿಸಂಖ್ಯಾಶಾಸ್ತ್ರೀಯ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

## ಅಧ್ಯಾಯ ೨

# ಬೈಲುಪತ್ತಾರರ ಮೂಲ ಮತ್ತು ಪ್ರಸಾರ

# ೨. ಬೈಲುಪತ್ತಾರರ ಮೂಲ ಮತ್ತು ಪ್ರಸಾರ

ಪ್ರಪಂಚದ ಯಾವುದೇ ಸಮುದಾಯವನ್ನು ನೋಡಿದಾಗ ಆ ಸಮುದಾಯವು ತನ್ನದೆಯಾದಂತಹ ಸ್ವರೂಪ ಹೊದಿರುತ್ತದೆ. ಸಮಾಜವು ನಿತ್ಯ ಪರಿವರ್ತನಾ ಶೀಲವಾಗಿರುವುದರಿಂದ ಅದು ತನ್ನ ಮೂಲ ನೆಲೆಯನ್ನು ಗುರುತಿಸಿಕೊಳ್ಳುವುದಕ್ಕಾಗಿ ತನ್ನ ಅಂತರಾಳದಲ್ಲಿ ಅನೇಕ ರೀತಿಯ ಜನಪದ ಆಕರಗಳು ಹೊಂದಿರುತ್ತದೆ. ಇಂತಹ ಜನಪದ ಆಕರಗಳಲ್ಲಿ ಜನಪದ ಕಥೆಗಳು ತೀರ ಅಲಕ್ಷಿತ ಸಮುದಾಯಗಳು ತನ್ನಗರಿವಿಲ್ಲದಂತೆ ತನ್ನ ಮುಂದಿನ ಪೀಳಿಗೆಗಳಿಗೆ ಮುಂದುವರೆಸಿಕೊಂಡು ಹೋಗುತ್ತಿರುತ್ತವೆ. ಅಲ್ಲದೆ ಸಮುದಾಯದ ಮೂಲ ಮತ್ತು ಪ್ರಸಾರವನ್ನು ಗುರುತಿಸಿಕೊಳ್ಳುವಂತಹ ಜನಪದ ಹಾಡುಗಳು, ಆಚರಣೆಗಳು, ರೂಢಿ ಸಂಪ್ರದಾಯಗಳು ಸಾಂಸ್ಕೃತಿಕ ಕೇಂದ್ರಗಳು ಕೂಡ ಸಮುದಾಯದ ಇತಿಹಾಸವನ್ನು ಕಟ್ಟಿಕೊಡುವ ಸಂಕೇತಗಳಾಗಿ ಕಾರ್ಯನಿರ್ವಹಿಸುತ್ತವೆ. ಸಮುದಾಯವು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಬರುವುದಕ್ಕೆ ತನ್ನದೆಯಾದಂತಹ ಅನೇಕ ಕಷ್ಟ ಸುಖಗಳ ಕಟ್ಟನ್ನು ಆ ಸಮುದಾಯ ಹೊಂದಿರುತ್ತದೆ.

ಬೈಲುಪತ್ತಾರರು ಮೂಲತಃ ಓರಿಸ್ಸಾದಿಂದ ವಲಸೆ ಬಂದವರು ಎಂದು ಸಮುದಾಯದವರೇ ಹೇಳುತ್ತಾರೆ. ಅಲ್ಲದೆ ಮಾನವಶಾಸ್ತ್ರಜ್ಞ ಕೆ.ಎಸ್.ಸಿಂಗ್ ರವರು "They recall their migration from Jagantha Puri in Orissa" ಎಂದು ದಾಖಲಿಸಿದ್ದಾರೆ. ಬಹುಶಃ ಕೆ.ಎಸ್.ಸಿಂಗ್‌ರವರು ಈ ಸಮುದಾಯದವರನ್ನು ಸಂದರ್ಶಿಸಿಯೇ ಇವರು ಓರಿಸ್ಸಾ ಮೂಲದವರು ಎಂದು ದಾಖಲಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**೧. ಜನಪದ ಕಥೆ (ಮೂಲ ಕುರಿತು)**

ಬೈಲು ಪತ್ತಾರರ ವಕ್ತೃ ಲಚಮಣ್ಣನವರು ಹೇಳುವ ಪ್ರಕಾರ "ಓರಿಸ್ಸಾ ರಾಜ್ಯದ ಜಗನ್ನಾಥಪುರಿ" ದೇವಾಲಯದ ಸಮೀಪದಲ್ಲಿ 'ಸೂಜಿಗಲ್' ಎಂಬ ಪಟ್ಟಣವಿದಿತ್ತು ಆ ಸೂಜಿಗಲ್ ಪಟ್ಟಣದ ಸೂತ್ತಲೂ ಅರಗಿನ ಕೋಟೆಯನ್ನು ಕಟ್ಟಲಾಗಿತ್ತು. ಈ ಅರಗಿನ ಕೋಟೆಯನ್ನು ಏಕ ಚಕ್ರಾಧಿಪತ್ಯವನ್ನು ಹೊಂದಿರುವ 'ರಾಜ ಚಕ್ರವರ್ತಿ' ಎಂಬ ಅರಸನು ಆಳುತ್ತಿದ್ದನು. ಆ ಅರಸನಿಗೆ ಸುಂದರಿಯಾದ 'ಪಾಂಚಾಳಿ' ಎಂಬ ಹೆಣ್ಣು ಮಗಳಿದ್ದಳು. ಇವಳು ಕಾಳಿಯ ಭಕ್ತನಾದ ಮತ್ತು ಬೈಲು ಪತ್ತಾರರ

ಸಾಂಸ್ಕೃತಿಕ ವೀರನಾದ ದೈವಜ್ಞನಿಗೆ ಪ್ರೇಮಿಸುತ್ತಾಳೆ. ಇವರಿಬ್ಬರ ಪ್ರೇಮದ ವಿಷಯ ತಿಳಿದ ರಾಜ ಚಕ್ರವರ್ತಿಗೆ, ತನ್ನ ಮಗಳು ಒಬ್ಬ ಸಾಮಾನ್ಯ ಕಾಳಿಯ ಭಕ್ತನಾದ ದೈವಜ್ಞನಿಗೆ ಪ್ರೀತಿಸುವುದು ಇಷ್ಟವಿರುವುದಿಲ್ಲ. ಹೀಗಾಗಿ ಒಂದು ದಿನ ದೈವಜ್ಞ ಮತ್ತು ಪ್ರೇಯಸಿಯಾದ 'ಪಾಂಚಾಳಿ' ಅರಗಿನ ಕೋಟೆಯಲ್ಲಿ ಏಕಾಂತದಲ್ಲಿರುವಾಗ 'ರಾಜ ಚಕ್ರವರ್ತಿ' ಮಹಾರಾಜನು ಆ ಅರಗಿನ ಕೋಟೆಗೆ ಬೆಂಕಿ ಹಚ್ಚಿಸುತ್ತಾನೆ. ಆಗ ಅವರಿಬ್ಬರೂ ಪ್ರಾಣಪಾಯದಿಂದ ಪಾರಾಗಿ ವಿವಿಧ ಪ್ರದೇಶಗಳಿಗೆ ವಲಸೆ ಬರುತ್ತಾರೆ. ಹೀಗಾಗಿ ಇವರಿಬ್ಬರ ಕೂಡುವಿಕೆಯಿಂದಲೇ ಬೈಲು ಪತ್ತಾರರ ಸಮುದಾಯ ಬೆಳೆದಿದೆ ಎಂದು ಹೇಳುತ್ತಾರೆ.

೨. ಜನಪದ ಕಥೆ (ಮೂಲ ಕುರಿತು)

ಸುರುಪುರ್ ನಿವಾಸಿ ವಕ್ತೃರಾದ ಮಾನಪ್ಪನವರ ಮಗ ರಮೇಶ ಹುಣಸಗಿ ಹೇಳುವ ಪ್ರಕಾರ "ಓರಿಸ್ಸಾ ರಾಜ್ಯದ ಜಗನ್ನಾಥ ಪುರಿ"ಯ ಹತ್ತಿರವಿರುವ ಅರಗಿನ ಕೋಟೆ ಹೊಂದಿರುವ 'ಸೂಜಿಗಲ್' ಪಟ್ಟಣವನ್ನು. ಮನು-ಮಯಾ-ಶಿಲ್ಪಿ-ತ್ವಷ್ಟ್ರಿ-ದೈವಜ್ಞ ಅಥವಾ ವಿಶ್ವಜ್ಞ. ಎಂಬ ಐದು ಜನ ದೈವೀ ಮಹಾರಾಜರು ಆಳುತ್ತಿದ್ದರು. ಈ ಐದು ಜನ ದೈವೀ ಮಹಾರಾಜರಲ್ಲಿ ದೈವಜ್ಞ ಎಲ್ಲರಿಗಿಂತ ಕಿರಿಯನಾಗಿದ್ದನು. ಇವನು ತನ್ನ ಆಸ್ಥಾನದಲ್ಲಿ ನರ್ತನೆ ಮಾಡುತ್ತಿದ್ದ ರಾಜ ನರ್ತಕಿಯಾದ 'ಪಾಂಚಾಳಿ'ಯೊಂದಿಗೆ ಓರಿಸ್ಸಾ ರಾಜ್ಯವನ್ನು ಬಿಟ್ಟು ವಿವಿಧ ಪ್ರದೇಶಗಳಿಗೆ ಆಕೆಯೊಂದಿಗೆ ಸಂಸಾರ ಮಾಡುತ್ತಾ ಅಲೆಮಾರಿ ಜೀವನ ನಡೆಸುತ್ತಾನೆ. ಅವರ ಸಂಸಾರಿಕ ಜೀವನದ ಕೊಡುಗೆಯೇ ನಮ್ಮ ಸಮುದಾಯ ಎಂದೂ ಹೇಳುತ್ತಾರೆ.

ಈ ಮೇಲಿನ ಎರಡು ಜನಪದ ಕಥೆಗಳನ್ನು ನೋಡಿದಾಗ ಸಮುದಾಯದ ಬದುಕಿನ ಹಿಂದೆ ಘೋರವಾದ ಘಟನೆಗಳ ಸಂಕೇತವನ್ನು ಪ್ರತಿಬಿಂಬಿಸುತ್ತದೆ. ಬಹುಶಃ ಒಂದು ಕಾಲದಲ್ಲಿ ಒಂದು ಕಡೆ ನೆಲೆನಿಂತ್ತಿರುವ ಈ ಸಮುದಾಯ, ಅನ್ಯರ ಕಿರುಕಳದಿಂದ ಇಲ್ಲವೇ ಬಡತನದ ಹಿನ್ನೆಲೆಯಲ್ಲಿ ಅಥವಾ ತನ್ನ ವ್ಯವಹಾರಿಕ ವೃತ್ತಿದಿಂದ ವಿವಿಧ ಪ್ರದೇಶಗಳಿಗೆ ವಲಸೆ ಬಂದಿರಬಹುದು ಎಂದು ಊಹಿಸಬಹುದು.

೩. ಸಮುದಾಯದ ಪದ ನಿಷ್ಪತ್ತಿ ಮತ್ತು ಅರ್ಥ

ಪ್ರಪಂಚದ ದಿನ ನಿತ್ಯದ ವ್ಯವಹಾರಕ ಬದುಕಿನಲ್ಲಿ ಹೆಸರೇ ಮೂಲ ಕಾರಣವಾಗಿರುತ್ತದೆ. ಅಲ್ಲದೆ ಆ ಹೆಸರಿನಲ್ಲಿ ತನ್ನದೆಯಾದಂತಹ ಸತ್ಯಾಂಶಗಳನ್ನೊಳಗೊಂಡ ಅರ್ಥದ ಚರಿತ್ರೆಯನ್ನು ಕೂಡಾ ಕ್ರೋಡಿಕರಿಸಿಕೊಂಡಿರುತ್ತದೆ. ಪ್ರಪಂಚದಲ್ಲಿಯ ನೈಸರ್ಗಿಕ ವಸ್ತುಗಳಿಂದ ಹಿಡಿದು, ಅದು ಪ್ರಾಣಿ ಪಕ್ಷಿಗಳಿಂದ ವ್ಯಕ್ತಿ ಮತ್ತು ಸಾಮುದಾಯಿಕ ಬದುಕಿನ ಆಚೇಯವರೆಗೂ ಆವರಿಸಿಕೊಂಡಿರುತ್ತದೆ.

ಒಂದು ಪದ ಅಥವಾ ಹೆಸರು ಒಬ್ಬ ವ್ಯಕ್ತಿಗೆ ಅನ್ವಯಿಸಿಕೊಂಡಾಗ ಆ ವ್ಯಕ್ತಿಯ ಧರ್ಮ-ಜಾತಿ-

ಪಂಥ- ಉಪಜಾತಿಗಳ ಸಮಗ್ರ ಮಾಹಿತಿ ಕೊಡುತ್ತದೆ. ಇದನ್ನು ಒಂದು ಸಮುದಾಯಕ್ಕೆ ಅನ್ವಯಿಸಿಕೊಂಡಾಗ ಆ ಸಮುದಾಯದ ವೃತ್ತಿ-ಭಾಷೆ-ಸಂಸ್ಕೃತಿ ಸಂಪ್ರದಾಯಗಳು ರೀತಿ-ನೀತಿಗಳನ್ನು ವಿವಿಧ ಆಕರಗಳಿಂದ ಕಲೆಹಾಕಿ ಆ ಸಮುದಾಯದ ಚಿತ್ರಣವನ್ನು ಬಿಂಬಿಸುತ್ತದೆ.

ಇಲ್ಲಿ ಪ್ರಸ್ತುತ 'ಬೈಲುಪತ್ತಾರರು' ಎಂಬ ಪದವು ಕೂಡಾ ಎರಡು ಶಬ್ದಗಳನ್ನೊಳಗೊಂಡ ಸಂಯುಕ್ತ ಪದವಾಗಿದೆ. ಬೈಲು+ಪತ್ತಾರರು - ಬೈಲು ಎಂಬುದು ಬಯಲು ಪ್ರದೇಶ, ಮೈದಾನ, ವಿಶಾಲ ಪ್ರದೇಶ ಎಂಬ ಅರ್ಥವನ್ನು ಸೂಚಿಸುತ್ತದೆ. ಪತ್ತಾರರು- ಎಂದರೆ ಅಕ್ಕಸಾಲಿಗರು ಎಂಬ ಅರ್ಥ ಸೂಚಿಸುತ್ತದೆ.

"ಬೈಲು ಪತ್ತಾರರು" ಎಂಬ ಉಚ್ಛಾರಣೆ ಅರ್ಥವನ್ನು ನೋಡಿದಾಗ, ಆ ಊರಿನ ಹೊರವಲಯದ ವಿಶಾಲವಾದ ಪ್ರದೇಶಗಳಲ್ಲಿ ಬಿಡಾರಗಳನ್ನು ಹಾಕಿ ಆ ಊರಿನ ಜನಸಾಮಾನ್ಯರಿಗೆ ಸಿಗುವಂತಹ ಅಲಂಕಾರಿಕ ಆಭರಣಗಳನ್ನು ತಯಾರಿಸಿ ಮಾರಾಟ ಮಾಡುವ ಅಲೆಮಾರಿ ಬೈಲು ಅಕ್ಕಸಾಲಿಗರು ಎಂಬ ಅರ್ಥವನ್ನು ಸೂಚಿಸುತ್ತದೆ.

**ಪ್ರಾದೇಶಿಕವಾಗಿ ಬೈಲು ಪತ್ತಾರರನ್ನು ಹೀಗೆ ಗುರುತಿಸಲಾಗುತ್ತದೆ**

೧. ಬೈಲು ಪತ್ತಾರರನ್ನು ಕರ್ನಾಟಕದ ಆಡು ಭಾಷೆಯಲ್ಲಿ ಇವರಿಗೆ ಬೈಲು ಪತ್ತಾರ ಮತ್ತು ಬೈಲು ಅಕ್ಕಸಾಲಿಗರು ಎಂದು ಕರೆಯುತ್ತಾರೆ.

೨. ಗುಲ್ಬರ್ಗಾ ಜಿಲ್ಲೆಯ ಬೈಲು ಪತ್ತಾರರ ಅಧ್ಯಯನದ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಆಂಧ್ರದ ಗಡಿಭಾಗದ ಪ್ರದೇಶಗಳಲ್ಲಿ, ತೆಲಗು ಭಾಷೆಯಲ್ಲಿ "ಬೈಟ ಕಂಶುಲ್‌ವಾಲ್" ಎಂದು ಕರೆಯುತ್ತಾರೆ.

೩. ಗುಲ್ಬರ್ಗಾ ಜಿಲ್ಲೆಯ ಮಹಾರಾಷ್ಟ್ರದ ಗಡಿಭಾಗದಲ್ಲಿ ಮತ್ತು ಮರಾಠಿ ಭಾಷೆಯಲ್ಲಿ ಇವರಿಗೆ ಪರದೇಶಿ ಪೊದ್ದಾರ್ ಎಂದು ಕರೆಯುತ್ತಾರೆ.

**೪.ಅಲೆಮಾರಿ ಜೀವನ**

ಮೂಲತಃ ಅಲೆಮಾರಿಗಳಾದ ಬೈಲುಪತ್ತಾರರು ಊರಿನ ಹೊರವಲಯದ ಮೈದಾನಗಳಲ್ಲಿ, ಇಲ್ಲವೆ ಶಾಲೆ, ಗೋಡಾವನ, ಗುಡಿ ಗುಂಡಾರ, ಮಸಿದಿಗಳ ಹತ್ತಿರ ತಮ್ಮ ಗುಂಪಿನವರೊಂದಿಗೆ ಒಂದು ಸ್ಥಳದಲ್ಲಿ ಡೇರಿಗಳನ್ನು ಹಾಕಿಕೊಂಡು, ಮಳೆ ಬರಲಿ, ಗಾಳಿಬೀಸಲು, ಚಳಿ ಬಿಡಲಿ, ಬಿಸಿಲು ಬೀಳಲಿ ಇದುವೇ ಅವರ ಅರಮನೆ. ಇಳಿದಂತಹ ಊರಿನಲ್ಲಿ ತಮ್ಮ ಬೈಲುಪತ್ತಾರಿಕೆ ಕೆಲಸಗಳನ್ನು ಮಾಡಿ ಮತ್ತು ಸಿದ್ಧ ಆಭರಣಗಳನ್ನು ಮಾರಾಟಮಾಡಿ ಮುಂದಿನ ಊರನ್ನು ಆಯ್ಕೆ ಮಾಡಿಕೊಂಡು ತಮ್ಮ ನೆಚ್ಚಿನ ಪ್ರಾಣಿಯಾದ ಕತ್ತೆ ಅಥವಾ ಕುದುರೆಗಳ ಮೇಲೆ ತಮ್ಮ ಸರಕು ಸಾಮಾನುಗಳನ್ನು ಹೇರಿಕೊಂಡು

ಹೋಗುತ್ತಾರೆ. ಅಂತೆಯೇ ಜಾನ್ ಬ್ರೋರವರು ಇವರ ಅಲೆಮಾರಿ ಜೀವನ ಕುರಿತು "Individual families used to travel from village to village, they would camp at the Hanuman(Anjaneiah) temple out side the village their means of transport was the donkey" ಎಂಬುದು ಅಲೆಮಾರಿ ಜೀವನದ ಬದುಕಿನ ಚಿತ್ರಣವನ್ನು ವಿವರಿಸಿದ್ದಾರೆ.

ನಿರಂತರ ಅಲೆಮಾರಿಗಳಾದ ಬೈಲುಪತ್ತಾರರು ತಮ್ಮ ಇತ್ತೀಚಿನ ದಿನಗಳಲ್ಲಿ ಹಲವಾರು ಗ್ರಾಮಗಳಲ್ಲಿ ವಾಸವಾಗಿದ್ದು, ತಾವು ತಯಾರಿಸಿದ ಆಭರಣಗಳನ್ನು ಸುತ್ತಲಿನ ಗ್ರಾಮಗಳಿಗೆ ಹೋಗಿ ಮಾರಾಟಮಾಡಿ ಅರೆ ಅಲೆಮಾರಿ ಜೀವನದ ದಾರಿ ಹಿಡಿದಿದ್ದಾರೆ. ಅಲ್ಲದೆ ನಗರದ ಕೊಳಚೆ ಪ್ರದೇಶಗಳಲ್ಲಿ ಡೇರೆಗಳನ್ನು ಹಾಕಿಕೊಂಡು ನೆಲೆಸಿರುವುದು ಕಂಡುಬರುತ್ತದೆ.

೫. ನೆಲೆಗಳು

ಬೈಲುಪತ್ತಾರರ ಮೂಲ ಓರಿಸ್ಸಾ ಆಗಿದ್ದರೂ ಕಾರಣಾಂತರಗಳಿಂದ ಅವರು ಭಾರತದಾದ್ಯಂತ ವಲಸೆ ಹೋಗಿರುವುದು ಕಂಡು ಬರುವುದು. ಇವರ ವೃತ್ತಿ ಪತ್ತಾರಿಕೆಯಾಗಿರುವುದರಿಂದ ಪತ್ತಾರಿಕೆ ಕೆಲಸ ಹುಡುಕಿಕೊಂಡು ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗಿರುವರು. ಕರ್ನಾಟಕದಲ್ಲಿಯು ಇವರ ವಲಸೆ ಗುರುತರವಾಗಿ ಕಂಡು ಬರುವುದು. ವಲಸೆ ಕಾಲಾಂತರದಲ್ಲಿ ನೆಲೆಗಳಿಗೆ ಕಾರಣವಾಗಿದೆ. ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ನೆಲೆಗಳ ಮಾಹಿತಿ ಹೀಗಿದೆ. ಜಿಲ್ಲೆಯ ಯಾದಗಿರಿ ತಾಲೂಕಿನಲ್ಲಿ ಒಟ್ಟು ೭೬ ಕುಟುಂಬಗಳಿದ್ದು ತಾಲೂಕ ಸೇರಿದಂತೆ ಸುಮಾರು ೩೦ ಗ್ರಾಮಗಳಲ್ಲಿ ನೆಲೆಸಿದ್ದಾರೆ. ಶಾಹಪುರ್ ತಾಲೂಕಿನಲ್ಲಿ ಒಟ್ಟು ೬೮ ಕುಟುಂಬಗಳಿದ್ದು ತಾಲೂಕು ಸೇರಿದಂತೆ ಒಟ್ಟು ೩೯ ಗ್ರಾಮಗಳಲ್ಲಿ ನೆಲೆಸಿದ್ದಾರೆ. ಮೂರನೆಯದಾಗಿ ಗುಲ್ಬರ್ಗಾ ನಗರದಲ್ಲಿ ಒಟ್ಟು ೧೩ ಕುಟುಂಬಗಳಿದ್ದು ೩ ನೆಲೆಗಳಲ್ಲಿ ಮಾತ್ರ ನೆಲೆಸಿದ್ದಾರೆ. ಆದರೆ ಗ್ರಾಮೀಣ ಪ್ರದೇಶಗಳಲಿ ನೆಲೆಸಿರುವದಿಲ್ಲ. ಸುರುಪುರ ತಾಲೂಕಿನಲ್ಲಿ ಒಟ್ಟು ೧೨ ಕುಟುಂಬಗಳಿದ್ದು ೫ ಗ್ರಾಮಗಳಲ್ಲಿ ನೆಲೆಸಿದ್ದಾರೆ. ಜೇವರ್ಗಿ ತಾಲೂಕಿನಲ್ಲಿ ಒಟ್ಟು ೯ ಕುಟುಂಬಗಳಿದ್ದು ತಾಲೂಕು ಸೇರಿ ೩ ನೆಲೆಗಳಲ್ಲಿ ನೆಲೆಸಿದ್ದಾರೆ. ಚಿತ್ತಾಪುರ ಮತ್ತು ಸೇಡಂ ತಾಲೂಕಗಳಲ್ಲಿ ಪ್ರತಿಯಾಗಿ ೪ ಕುಟುಂಬಗಳಿದ್ದು, ೩ ಗ್ರಾಮಗಳಲ್ಲಿ ಮಾತ್ರ ನೆಲೆಸಿದ್ದಾರೆ. ಕೊನೆಯದಾಗಿ ಆಳಂದ ತಾಲೂಕಿನ ನಿಂಬಾಳ್ ಗ್ರಾಮದಲ್ಲಿ ಮಾತ್ರ ೧ ಕುಟುಂಬವಿರುವುದು. ಮುಂದಿನ ಪುಟದ ಗುಲ್ಬರ್ಗಾ ಜಿಲ್ಲೆಯ(ಭೂಪಟ: ೨ ನೋಡಿ)ಯಲ್ಲಿ ತೋರಿಸಿರುವಂತೆ ಬೈಲುಪತ್ತಾರರ ನೆಲೆಗಳನ್ನು ಕಾಣಬುಹುದು.

# ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ನೆಲೆಗಳು




I ಆಳಂದ
೧. ನಿಂಬಾಳ
II ಚಿತ್ತಾಪುರ
೧. ಭೀಮನಹಳ್ಳಿ
೨. ಕೊಲ್ಲೂರ್
೩. ಅಳ್ಳೋಳಿ
III ಗುಲ್ಬರ್ಗಾ
೧. ಗುಲ್ಬರ್ಗಾ
IV ಜೇವರ್ಗಿ
೧. ಜೇವರ್ಗಿ
೨. ಯಾಳವಾರ
೩. ಇಜೇರಿ
V ಸೇಡಂ
೧. ಗೌನಳ್ಳಿ
೨. ಮುದೋಳ
೩. ಸೇಡಂ
VI ಶೋರಾಪುರ
೧. ದಿವಳಗುಡ್ಡ
೨. ಗೆಜ್ಜಲ್‌ಮರಿ
೩. ಹುಣಸಗಿ
೪. ಕಕ್ಕೇರಾ
೫. ಶೋರಾಪುರ
VII ಶಹಾಪುರ
೧. ಅಬಿಶಾಳ
೨. ಚಟ್ನಳ್ಳಿ
೩. ಚಾಮನಾಳ
೪. ಡಿಗಿ ಸೈದಪೂರ
೫. ಗುಂಡಳ್ಳಿ
೬. ಗುರುಸಣಗಿ
೭. ಗೊಂದನೋರ್
೮. ಗೋಗಿ
೯. ಹತ್ತಿಗುಡೂರು
೧೦. ಹಾಲಗೇರಿ
೧೧. ಹುಂಡೇಕಲ್
೧೨. ಇಂಗಳಿಗಿ
೧೩. ಇಬ್ರಾಹಿಂಪುರ
೧೪. ಕಾಡಮಗೇರಾ
೧೫. ಕುರುಕುಂದಾ
೧೬. ಕೊಂಕಲ
೧೭. ಕೊನಳ್ಳಿ
೧೮. ಖಾನಾಪುರ
೧೯. ಮಳ್ಳಳ್ಳಿ
೨೦. ಮಡ್ನಾಳ
೨೧. ನಾಯ್ಕಿಲ್
೨೨. ನಾಗನಟಗೀ
೨೩. ಸಿರಿವಾಳ
೨೪. ಶಾಹಪುರ
೨೫. ತುಮಕೂರ
೨೬. ಉಳ್ಳೆಸೂಗೂರು
೨೭. ವನದುರ್ಗ
೨೮. ವಸಗೇರಾ
೨೯. ವಿಭೂತಿಹಳ್ಳಿ
VIII ಯಾದಗಿರಿ
೧. ಅರಕೇರಾ ಕೆ.
೨. ಬಂದಳ್ಳಿ
೩. ಬಡೇಪಲ್ಲ
೪. ಬಳಿಪುರ
೫. ಬಾಚವಾರ
೬. ಬೆಳಗೇರಾ
೭. ಚಂಡ್ರಿಕಿ
೮. ಚಿಂತಗುಂಟಾ
೯. ಗಾಜರಕೊಟ್ರಕಿ
೧೦. ಗುರುಮಿಠಕಲ್
೧೧. ಹತ್ತಿಕುಣಿ
೧೨. ಹೆಡ್ಗಿಮದ್ರಿ
೧೩. ಜನಿಕೇರಾ
೧೪. ಕಂಚಗಾರಹಳ್ಳಿ
೧೫. ಕಂದಕೂರ್
೧೬. ಕಟಗಿಶಾಹಪುರ
೧೭. ಕೂಲೂರ್
೧೮. ಕೋಟಗೇರಾ
೧೯. ಮುಂಡರಗಿ
೨೦. ಮೈಲಾಪುರ ಅಳಿಗೇರಿ
೨೧. ರಾಂಪುರ
೨೨. ರಾಮಸಮುದ್ರ
೨೩. ಸೈದಾಪುರ
೨೪. ಶೆಟಿಗೇರಾ
೨೫. ವನಿಗೇರಾ
೨೬. ವಂಕಸಂಬ್ರಾ
೨೭. ಯರಗೋಳ
೨೮. ಯಲಸತ್ತಿ
೨೯. ಯಾದಗಿರಿ
೩೦. ಯಲ್ಲೇರಿ

## ೬. ಜನಸಂಖ್ಯೆ ಮತ್ತು ಪ್ರಸಾರ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಒಟ್ಟು ಕುಟುಂಬಗಳು ೧೮೭. ಇದರಲ್ಲಿ ೭೬ ಕುಟುಂಬಗಳು ಯಾದಗಿರಿ ತಾಲೂಕಿನಲ್ಲಿ ನೆಲೆಸಿವೆ. ಯಾದಗಿರಿಯ ತಾಲೂಕು ಕೇಂದ್ರವಾಗಿದ್ದು. ರೈಲು ಮತ್ತು ರಸ್ತೆ ಸಂಪರ್ಕ ಹೊಂದಿದೆ. ಇದು. ಜಿಲ್ಲಾ ಕೇಂದ್ರವಾಗಲು ಎಲ್ಲ ಅರ್ಹತೆಗಳನ್ನು ಹೊಂದಿದೆ. ಯಾದಗಿರಿ ಸಮೀಪದ ಶಹಾಪುರ ತಾಲೂಕಿನಲ್ಲಿಯೂ ಇವರ ೬೮ ಕುಟುಂಬಗಳು ವಾಸವಾಗಿದೆ. ಉಳಿದ ತಾಲೂಕುಗಳಲ್ಲಿ ಇವರು ವಿರಳವಾಗಿ ನೆಲೆಗೊಂಡಿದ್ದಾರೆ. ಅಫ್‌ಜಲ್‌ಪುರ ಮತ್ತು ಚಿಂಚೋಳಿ ತಾಲೂಕುಗಳಲ್ಲಿ ಇವರ ವಾಸ ಕಂಡುಬರುವುದಿಲ್ಲ. ಜಿಲ್ಲೆಯಲ್ಲಿ ೬೬೦ ಗಂಡು ಮತ್ತು ೫೮೭ ಹೆಣ್ಣು ಒಟ್ಟು ೧,೨೪೮ ಜನ ಬೈಲುಪತ್ತಾರರು ವಾಸಿಸುವರು (ಕೊಷ್ಟಕ ೨.೧ ನೋಡಿ).

**ಕೋಷ್ಟಕ ೨.೧ ಗುಲ್ಬರ್ಗಾ ಜಿಲ್ಲೆಯ ತಾಲೂಕುವಾರು ಕುಟುಂಬವಾರು ಮತ್ತು ಲಿಂಗವಾರು ಜನಸಂಖ್ಯೆ**

| ತಾಲ್ಲೂಕು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಆಳಂದ | ೧ | ೭ | ೩ | ೧೦ |
| ಚಿತ್ತಾಪುರ | ೪ | ೧೦ | ೧೦ | ೨೦ |
| ಗುಲ್ಬರ್ಗಾ ನಗರ | ೧೩ | ೫೬ | ೪೪ | ೧೦೦ |
| ಜೇವರ್ಗಿ | ೯ | ೩೪ | ೩೨ | ೬೬ |
| ಸೇಡಂ | ೪ | ೧೦ | ೧೧ | ೨೧ |
| ಸೋರಾಪುರ | ೧೨ | ೫೬ | ೪೯ | ೧೦೫ |
| ಶಾಹಾಪುರ | ೬೮ | ೨೦೩ | ೧೮೫ | ೩೮೯ |
| ಯಾದಗಿರ | ೭೬ | ೨೮೪ | ೨೫೩ | ೫೩೭ |
| ಒಟ್ಟು | ೧೮೭ | ೬೬೦ | ೫೮೭ | ೧೨೪೮ |

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಜನಸಂಖ್ಯೆವಾರು ಮಾಹಿತಿ ನೋಡಿದಾಗ, ಮೊದಲನೆಯದಾಗಿ ಜಿಲ್ಲೆಯ ಯಾದಗಿರಿ ತಾಲೂಕಿನಲ್ಲಿ ೨೮೪ ಜನ ಪುರುಷರು, ೨೫೩ ಸ್ತ್ರೀಯರು ಒಟ್ಟು ೫೩೭ ಜನರು ನೆಲೆಸಿದ್ದಾರೆ. ಎರಡನೆಯದಾಗಿ **ಶಾಹಾಪುರ್** ತಾಲೂಕಿನಲ್ಲಿ ೨೦೩ ಪುರುಷರು, ೧೮೫ ಸ್ತ್ರೀಯರು ಒಟ್ಟು ೩೮೯ ಜನ ನೆಲೆಸಿದ್ದಾರೆ. ಮೂರನೆಯ ಸ್ಥಾನ ಹೊಂದಿರುವ ಸುರುಪುರ ತಾಲೂಕಿನಲ್ಲಿ ೫೬ ಜನ ಪುರುಷರು, ೪೯ ಜನ ಸ್ತ್ರೀಯರು ಒಟ್ಟು ೧೦೫ ಜನ ವಾಸವಾಗಿದ್ದಾರೆ. ನಾಲ್ಕನೆಯ ಸ್ಥಾನ ಹೊಂದಿರುವ ಗುಲ್ಬರ್ಗಾ ಜಿಲ್ಲೆಯಲ್ಲಿ ೫೬ ಜನ ಪುರುಷರು ೪೪ ಸ್ತ್ರೀಯರು ಒಟ್ಟು ೧೦೦ ಜನ ಜಿಲ್ಲೆಯಲ್ಲಿ ನೆಲಿಸಿದ್ದಾರೆ. ಐದನೇ ಸ್ಥಾನ ಹೊಂದಿರುವ ಜೇವರ್ಗಿಯಲ್ಲಿ ೩೪ ಜನ ಪುರುಷರು ೩೨ ಸ್ತ್ರೀಯರು ಒಟ್ಟು ೬೬ ಜನ ನೆಲೆಸಿದ್ದಾರೆ. ಆರನೆಯ ಸ್ಥಾನ ಹೊಂದಿರುವ ಸೇಡಂನಲ್ಲಿ ೧೦ ಜನ ಪುರುಷರು ೧೧ ಜನ ಸ್ತ್ರೀಯರು ಒಟ್ಟು ೨೧ ಜನ ನೆಲೆಸಿದ್ದು ಏಳನೆಯ ಸ್ಥಾನ ಹೊಂದಿರುವ ಚಿತ್ತಾಪುರ ತಾಲೂಕಿನಲ್ಲಿ ೧೦ ಜನ ಪುರುಷರು ೧೦ ಜನ ಸ್ತ್ರೀಯರು ಒಟ್ಟು ೨೦ ಜನ ನೆಲೆಸಿದ್ದು ಸೇಡಂ

ತಾಲೂಕಿಗಿಂತ ಒಬ್ಬರ ಸಂಖ್ಯೆ ಮಾತ್ರ ಕಡಿಮೆಯಾಗಿದೆ. ಕೊನೆಯ ಸ್ಥಾನದಲ್ಲಿರುವ ಆಳಂದ ತಾಲೂಕಿನಲ್ಲಿ ೭ ಜನ ಪುರುಷರು ೩ ಜನ ಸ್ತ್ರೀಯರು ಒಟ್ಟು ೧೦ ಜನರು ನೆಲೆಸಿದ್ದು ಗುಲ್ಬರ್ಗಾ ಜಿಲ್ಲೆಯಲ್ಲಿಯೇ ಅತ್ಯಂತ ಕಡಿಮೆ ಜನ ನೆಲೆಸಿರುವ ತಾಲ್ಲೂಕು ಇದಾಗಿದೆ. ಎಲ್ಲಾ ತಾಲೂಕಗಳನೊಳಗೊಂಡಂತೆ ಇಡೀ ಗುಲ್ಬರ್ಗಾ ಜಿಲ್ಲೆಯಲ್ಲಿ ೬೬೦ ಜನ ಪುರುಷರು, ೫೮೭ ಸ್ತ್ರೀಯರು ಒಟ್ಟು ೧,೨೪೭ ಜನರು ಬೈಲುಪತ್ತಾರ ನಿವಾಸಿಗಳಾಗಿದ್ದಾರೆ.

### ಆಧಾರಗಳು

K.S.Singh., Indias Communities (A-G) (Dehli : Oxford University Press, 1998) P.189

# ೩. ಸಾಮಾಜಿಕ ಮತ್ತು ಆರ್ಥಿಕ ಜೀವನ

## ಸಾಮಾಜಿಕ ಜೀವನ

ಮಾನವರು ಸಮಾಜ ಜೀವಿಗಳು. ಸಮಾಜವಿಲ್ಲದೆ ಒಂಟಿಯಾಗಿ ಜೀವಿಸಲು ಮಾನವ ಇಚ್ಛಿಸುವುದಿಲ್ಲ. ಮಾನವ ಸಮಾಜವೆಂಬ ಚೌಕಟ್ಟಿನಿಂದಲೇ ಮಾನವನ ವ್ಯಕ್ತಿತ್ವ ವಿಕಾಸಗೊಳ್ಳುವುದು. ನಮ್ಮ ಸಮೂಹ ಜೀವನಕ್ಕೆ ಸಂಬಂಧಿಸಿದ ಹಲವಾರು ವ್ಯವಹಾರಗಳ ಮೇಲೆ ಸಮಾಜದ ಅಭಿಪ್ರಾಯಗಳ ಮುದ್ರೆ ಇರುತ್ತದೆ. ವ್ಯಕ್ತಿ ವ್ಯಕ್ತಿಗಳ ನಡುವೆ ಸಾಮಾಜಿಕ ಕ್ರಿಯೇ-ಅಂತರ್‌ಕ್ರಿಯೇಗಳ ಕ್ರಮಗಳಿಂದ ಸಮಾಜವು ರಚನೆಯಾಗಿರುತ್ತದೆ. "ವ್ಯಕ್ತಿ ಮತ್ತು ಸಮಾಜ"ಗಳ ನಡುವಿನ ಒಡನಾಟ ಜೀವನದಲ್ಲಿ ಸಮಾಜವು ಬಹು ಮುಖ್ಯ ಪಾತ್ರವಹಿಸುತ್ತದೆ. ಗಿಡ್ಡಿಂಗ್ಸ್ ಪ್ರಕಾರ "ಜೊತೆಗೂಡಿ ಇರಬಹುದಾದ ವ್ಯಕ್ತಿಗಳನ್ನು ಒಟ್ಟುಗೂಡಿಸಿ ಆದ ಒಂದು ಒಕ್ಕೂಟ, ಸಂಘಟನೆ ಹಾಗೂ ಔಪಚಾರಿಕ ಬಾಂಧವ್ಯಗಳ ಒಟ್ಟು ಮೊತ್ತವೇ ಸಮಾಜವಾಗಿದೆ" (ಶಂಕರ್ ರಾವ್, ಚ.ನ.,೧೯೯೫ :೫೩) ಎಂದಿದ್ದಾರೆ. ಮೈಕ್ಕೈವರ್ ಮತ್ತು ಪೇಜ್‌ರವರು "ಸಮಾಜವೆಂಬುದು ಸಾಮಾಜಿಕ ಸಂಬಂಧಿಗಳ ಒಂದು ಬಲೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

"ಸಮಾಜ ಎಂಬ ಕನ್ನಡ ಪದದ ಇಂಗ್ಲೀಷ ಸರಿಸಮಾನ ಪದವಾದ 'ಸೊಸೈಟಿ'(Society) ಎಂಬುದು "ಸೋಶಿಯಸ್" (Socius) ಎಂಬ ಲ್ಯಾಟಿನ್ ಶಬ್ದದಿಂದ ಉತ್ಪತ್ತಿಯಾಗಿದೆ. "ಸೋಶಿಯಸ್" ಎಂದರೆ ಒಡನಾಡಿತನ (Fellowship or compaionship) ಒಡನಾಡಿಗಳ ಒಡನಾಟದಿಂದ ಒಟ್ಟುಗೂಡಿರುವ ವ್ಯವಸ್ಥೆಯೇ ಸಮಾಜ" (ಶಂಕರ್ ರಾವ್, ಚ.ನ.,೧೯೯೫ :೫೨). ಬೈಲುಪತ್ತಾರರು ಕೂಡ ತಮ್ಮದೆಯಾದ ಸಮುದಾಯಿಕ ಸಾಮಾಜಿಕ ಜೀವನ ಸಾಗಿಸುತ್ತಿದ್ದಾರೆ. ಅಲೆಮಾರಿ ಜೀವನ ನಡೆಸುವ ಇವರು ತಮ್ಮ ಕುಟುಂಬ ಸಮುದಾಯ ಸಮಾಜಗಳೊಂದಿಗೆ ಬಹಳ ಪ್ರೀತಿ ವಿಶ್ವಾಸದಿಂದ ನಡೆದುಕೊಳ್ಳುತ್ತಾರೆ. ಕಳ್ಳತನ, ಸುಳ್ಳತನ, ಬಡಿವಾರಿಕೆ, ಪುಂಡಗಾರಿಕೆಯಿಂದ ಯಾವಾಗಲು ಬಹಳ ದೂರವಾಗಿರುತ್ತಾರೆ. "ಗಂಡಿಗೆ ಕಳವುಹೀನ, ಹೆಣ್ಣಿಗೆ ಹಾದರ ಹೀನ" ಎಂಬ ಜನಪದದ ಅನುಭವದ ನುಡಿಯನ್ನು 'ಸ್ತ್ರೀಯರು' ಮತ್ತು 'ಪುರಷರು' ಚೆನ್ನಾಗಿ ಅರಿತುಕೊಂಡು ಜೀವನ ಮಾಡುತ್ತಾರೆ. ವ್ಯಭಿಚಾರಕ್ಕೆ ಇವರಲ್ಲಿ ಎಳ್ಳಷ್ಟು ಅವಕಾಶವಿರುವುದಿಲ್ಲ. ಒಂದು ವೇಳೆ ಯಾವುದೇ ವ್ಯಕ್ತಿಯಾದವನ್ನು ತಮ್ಮ ಸಮುದಾಯದ ಸ್ತ್ರೀಯೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡಿದರೆ, ಆತನು ಸಮುದಾಯದ ಪಂಚಾಯ್ತಿ ಮೂಲಕ ವಿವಾಹ ವಿಚ್ಛೇಧನೆ ಪಡೆದುಕೊಂಡು ಆಕೆಯನ್ನು ವಿವಾಹ ಮಾಡಿಕೊಳ್ಳಬಹುದು. ಒಂದು ವೇಳೆ ವಿವಾಹವಾಗದೇ ಇರುವ ಮಹಿಳೆಯೊಂದಿಗೆ ಅನೈತಿಕ ಸಂಬಂಧ ಬೆಳೆದರೆ ಸಮುದಾಯದವರು

ಸೇರಿ ಮದುವೆ ಮಾಡುತ್ತಾರೆ. ಬೈಲುಪತ್ತಾರರಲ್ಲಿ ಚಪ್ಪಲಿಯಿಂದ ಹೊಡೆಯಿಸಿಕೊಂಡವರಿಗೆ ಮತ್ತು ಹೊಡೆದವರಿಗೆ ಕುಲಬಹಿಷ್ಕಾರ ಹಾಕಲಾಗುತ್ತದೆ. ಒಂದು ವೇಳೆ ಬೇರೆ ಜಾತಿಯವರು ಹೊಡೆದರೆ ಅವರು ಸರ್ವನಾಶವಾಗುತ್ತಾರೆ ಎಂದು ನಂಬುತ್ತಾರೆ. ಚಪ್ಪಲಿಯಿಂದ ಹೊಡೆಸಿಕೊಂಡವರಿಗೆ ಕುಲಶುದ್ಧಿಕರಣ ಮಾಡಿ ಮತ್ತೇ ಸಮುದಾಯದಲ್ಲಿ ಸೇರಿಸಿಕೊಳ್ಳಲು ಅನುವು ಮಾಡಿಕೊಡುತ್ತಾರೆ.

### ೨. ಬೆಡಗುಗಳು

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರಲ್ಲಿ ಬಂಜೋಡ್ ಬೆಡಗಿನವರು ಅಧಿಕ ಸಂಖ್ಯೆಯಲ್ಲಿದ್ದು ಅವರ ಒಟ್ಟು ಕುಟುಂಬಗಳು ೫೧ ಇವೆ. ಇವರು ಹೆಚ್ಚಾಗಿ ಯಾದಗಿರಿ ತಾಲೂಕಿನಲ್ಲಿರುವವರು. ಪಚಮೆ ಬೆಡಗಿನವರು ಅತಿ ವಿರಳರು ಜಿಲ್ಲೆಯಲ್ಲಿ ಅವರ ಕುಟುಂಬಗಳು ಕೇವಲ ೧೨. ಈ ಬೆಡಗುಗಳ ರಚನೆಯು ಇವರಲ್ಲಿಯ ಸಾಮಾಜಿಕ ಸಂಘಟನೆಯನ್ನು ನಿರೂಪರಿಸುತ್ತವೆ (ಕೊಷ್ಟಕ ೩.೧ ಮತ್ತು ವೃತ್ತಚಿತ್ರ ೩.೧ ನೋಡಿ).

**ಕೋಷ್ಟಕ ೨.೧ ಬೈಲುಪತ್ತಾರರ ಗುಲ್ಬರ್ಗಾ ಜಿಲ್ಲೆಯ ತಾಲೂಕುವಾರು ಬೆಡಗುಗಳು**

| ತಾಲೂಕು | ಕುಟುಂಬ | ಸಪೋಡ್ | ಪರದನ್‌ವಾಡ | ಕಬಸ್ತೋಡ್ | ಗೌಡ್ಯ | ಬಂಜೋಡ್ | ಪಚಮೆ | ಮೂಕಲವಾಡ್ |
|---|---|---|---|---|---|---|---|---|
| ಆಳಂದ | ೧ | | | | | | | ೧ |
| ಚಿತ್ತಾಪುರ | ೪ | | | ೧ | | ೨ | ೧ | |
| ಗುಲ್ಬರ್ಗಾ ನಗರ | ೧೩ | ೧ | | ೪ | ೪ | | | ೪ |
| ಜೇವರ್ಗಿ | ೯ | | | ೨ | ೫ | ೨ | | |
| ಸೇಡಂ | ೪ | | | ೧ | ೧ | ೨ | | |
| ಸೋರಾಪುರ | ೧೨ | | | ೪ | ೨ | ೫ | | ೧ |
| ಶಾಹಾಪುರ | ೬೮ | ೧೮ | ೯ | ೧೮ | ೧೫ | ೯ | ೫ | ೨ |
| ಯಾದಗಿರ | ೭೬ | ೧ | ೫ | ೧೪ | ೮ | ೩೧ | ೬ | ೧೧ |
| ಒಟ್ಟು | ೧೮೭ | ೨೦ | ೧೪ | ೪೪ | ೩೫ | ೫೧ | ೧೨ | ೧೯ |

ವೃತ್ತಚಿತ್ರ ೩.೧ ಬೈಲುಪತ್ತಾರರ ಗುಲ್ಬರ್ಗಾ ಜಿಲ್ಲೆಯ ಬೆಡಗುಗಳು



ಬೈಲುಪತ್ತಾರರ ವಕ್ತೃಗಳಾದ ಖಾನಾಪುರದ ಶಾಂತಪ್ಪ, ಹತ್ತಿಕುಣಿಯ ಜಗನ್ನಾಥ, ಯಾದಗಿರಿಯ ಚಂದಪ್ಪ ಇವರುಗಳ ಪ್ರಕಾರ ಬೆಡಗುಗಳ ವಿವರಣೆ ಈ ರೀತಿಯಾಗಿದೆ

೨.೧. **ಸಪೋಡೊ/ಸುರ್ವೋಶಿ :** ಸಪೋಡ್ ಬೆಡಗಿನವರಿಗೆ ಸಮುದಾಯದಲ್ಲಿ ಮೊದಲನೆಯ ಸ್ಥಾನಮಾನಗಳನ್ನು ಕೊಡಲಾಗಿದೆ. ಸಪೋಡ್/ ಸುರ್ವೋಶಿ ಎಂದರೆ, ಸೂರ್ಯವಂಶ ಅಥವಾ ಸೂರ್ಯವಂಶದಿಂದ ಹುಟ್ಟಿದವರು ಎಂದು ಹೇಳಲಾಗುತ್ತದೆ. ಅಂದರೆ, ಇವರು ಅತ್ಯಂತ ಪುರಾತನ ಕಾಲದಲ್ಲಿ ಪ್ರಕೃತಿಶಕ್ತಿಗಳನ್ನು ಆರಾಧಿಸುವಂತಹ ಹಿನ್ನೆಲೆಯ ಸಂಕೇತವಾಗಿ ಸೂರ್ಯ ದೇವರನ್ನು ಆರಾಧಿಸಿರಬಹುದು. ಹೀಗಾಗಿ ಇವರು ತಮ್ಮನ್ನು ಸುರ್ವೋಶಿ ಎಂದು ಕರೆದುಕೊಂಡಿರಬಹುದು. ಅಲ್ಲದೆ ಇವರು ತಮ್ಮ ಮನೆತನಗಳಿಗೂ ಕೂಡ ಬೆಡಗುಗಳನ್ನಾಧರಿಸಿ ಕರೆಯುವ ಪದ್ಧತಿ ರೂಢಿಯಲ್ಲಿದೆ. ಈ ಬೆಡಗಿನವರೆಗೆ ಸಮುದಾಯದಲ್ಲಿ ಸಾಮ್ರಾಜ್ಯವಾಳುವ "ರಾಜ ಸಾಮ್ರಾಟ"ನ ಸ್ಥಾನಮಾನಗಳನ್ನು ನೀಡಲಾಗುತ್ತದೆ. ಸದ್ಯ ಗುಲ್ಬರ್ಗಾ ಜಿಲ್ಲೆಯಲ್ಲಿ ೩೦ ಕುಟುಂಬಗಳು ಈ ಬೆಡಗಿನವರು ವಾಸವಾಗಿದ್ದು, ಈ ಸಮುದಾಯವು ಜನಸಂಖ್ಯೆಯಲ್ಲಿ ನಾಲ್ಕನೆಯ ಸ್ಥಾನದಲ್ಲಿದ್ದಾರೆ.

೨.೨. **ಪರದನ್‌ವಾಡ್/ಪರದನ :** ಪರದನವಾಡ್ ಬೆಡಗಿನವರಿಗೆ ಸಮುದಾಯದಲ್ಲಿ ಎರಡನೆಯ ಸ್ಥಾನಮಾನಗಳನ್ನು ಕೊಡಲಾಗಿದೆ. ಪರದನ್‌ವಾಡ್ ಎಂದರೆ, "ಪ್ರಧಾನಮಂತ್ರಿ" ಎಂದು ಹೇಳಲಾಗುತ್ತದೆ. ಅಂದರೆ, ರಾಜನ ಆಸ್ಥಾನದ ಮಂತ್ರಿಯ ವಂಶದ ಬೆಡಗಿನವರು ಎಂದು ಹೇಳುತ್ತಾರೆ. ಇವರ ಮನೆತನಗಳಿಗೆ 'ಪರದನ್‌ವಾಡ್'ದವರ ಮನೆ ಎಂದು ಗುರುತಿಸಲಾಗುತ್ತದೆ. 'ಪರದ' ಎಂಬ ಕನ್ನಡ ಶಬ್ದದ ಬಳಕೆಯನ್ನು ನೋಡಿದಾಗ 'ಪರದ' ಎಂದರೆ ವ್ಯಾಪಾರಿ/ವರ್ತಕ ಎಂಬುದನ್ನು ಸೂಚಿಸುತ್ತದೆ. ಸದ್ಯ ಗುಲ್ಬರ್ಗಾ ಜಿಲ್ಲೆಯಲ್ಲಿಯ ಈ ಸಮುದಾಯದ ಬೆಡಗುವಾರು ಮಾಹಿತಿ ನೋಡಿದಾಗ ಪರದ್‌ವಾಡ್‌ದವರ ಕುಟುಂಬಗಳು ೧೪ ಇದ್ದು, ಆರನೆಯ ಸ್ಥಾನದಲ್ಲಿದ್ದಾರೆ.

೨.೩. **ಕಬಸ್ತೋಡ್/ಕಬಸ್ತೂಲ್/ಅಂಕುಶ :** ಕಬಸ್ತೋಡ್ ಬೆಡಗಿನವರಿಗೆ ಸಮುದಾಯದಲ್ಲಿ ಮೂರನೇ ಸ್ಥಾನಮಾನಗಳನ್ನು ಕೊಡಲಾಗುತ್ತದೆ. ಈ ಬೆಡಗಿನವರಲ್ಲಿನ ಸಂಪ್ರದಾಯ ರೀತಿ ನೀತಿಗಳು, ನ್ಯಾಯ ಪದ್ಧತಿಗಳನ್ನು ರಚಿಸುವಂತಹ "ಗ್ರಾಮ ಕುಲಕರ್ಣಿ"ಯ ಸ್ಥಾನಮಾನಗಳಿಗೆ ಹೋಲುತ್ತವೆ. ಮತ್ತು ಇವರ ಮನೆತನಗಳಿಗೂ ಕೂಡಾ ಕಬಸ್ತೋಡ್/ಅಂಕುಶದವರ ಮನೆ ಎಂದು ಗುರುತಿಸಿಲಾಗುತ್ತದೆ. ಅಲ್ಲದೆ ಆನೆಯ ಅಂಕುಶದ ವಂಶದವರು ಎಂದೂ ಇವರನ್ನು ಹೇಳಲಾಗುತ್ತದೆ. ಶಕ್ತಿಯುತವಾದ ದೃಢಕಾಯದ ಆನೆಯನ್ನು ನಿಯಂತ್ರಿಸುವ ಶಕ್ತಿ ಅಂಕುಶಕ್ಕೆ ಇರುತ್ತದೆ. ಹೀಗಾಗಿ ಈ ಹಿನ್ನೆಲೆಯಲ್ಲಿಯೇ ಸಮುದಾಯದಲ್ಲಿ ಈ ಬೆಡಗು ಹುಟ್ಟಿಕೊಂಡಿರಬಹುದು. ಸದ್ಯ ಗುಲ್ಬರ್ಗಾ ಜಿಲ್ಲೆಯಲ್ಲಿ ೪೪ ಕುಟುಂಬಗಳು ಈ ಬೆಡಗಿನವರದ್ದಾಗಿದ್ದು ಜಿಲ್ಲೆಯಲ್ಲಿ ದ್ವಿತೀಯ ಸ್ಥಾನದಲ್ಲಿದ್ದಾರೆ.

೨.೪. **ಗೌಡ್ಯ/ಗರಡ್ :** ಗೌಡ್ಯ ಬೆಡಗಿನವರಿಗೆ ಸಮುದಾಯದಲ್ಲಿ ನಾಲ್ಕನೆಯ ಸ್ಥಾನಮಾನಗಳನ್ನು

ಕೊಡಲಾಗುತ್ತದೆ. ವಿಷ್ಣುವಿನ ವಾಹನವಾದ ಗರುಡ ಪಕ್ಷಿಯ ವಂಶದವರು ತಾವು ಎಂದು ಹೇಳುತ್ತಾರೆ. ಅಲ್ಲದೆ ಸಮುದಾಯದಲ್ಲಿ ತಪ್ಪಿತಸ್ಥ ವ್ಯಕ್ತಿಗಳಿಗೆ ಶಿಕ್ಷೆ ಕೊಡುವ "ಪೋಲಿಸ್ ಪಾಟೀಲರ" ಸ್ಥಾನಮಾನಗಳನ್ನು ಇವರಿಗೆ ಕೊಡಲಾಗಿದೆ. ಅಂದರೆ, ಜಾತಿಯ ವಿಧಿ-ನಿಷೇಧಗಳನ್ನು ಕಾಯ್ದುಕೊಂಡು ಹೋಗುವ ಜವಾಬ್ದಾರಿಗಳನ್ನು ಈ ಬೆಡಗಿನವರ ಮೇಲೆ ಇರುತ್ತದೆ. ಸದ್ಯ ಗುಲ್ಬರ್ಗಾ ಜಿಲ್ಲಾವಾರು ಬೆಡಗುಗಳ ಮಾಹಿತಿಯನ್ನು ನೋಡಿದ್ದಾಗ ಈ ಬೆಡಗಿನವರ ಕುಟುಂಬಗಳು ೩೫ ಇದ್ದು ಜನಸಂಖ್ಯೆಯಲ್ಲಿ ಮೂರುನೆಯ ಸ್ಥಾನದಲ್ಲಿದ್ದಾರೆ.

೨.೫. **ಬಂಜೋಡ್/ಬಾಂಗಿ :** ಬಂಜೋಡ್ ಬೆಡಗಿನವರಿಗೆ ಸಮುದಾಯದಲ್ಲಿ ಐದನೆ ಸ್ಥಾನಮಾನಗಳನ್ನು ಕೊಡಲಾಗುತ್ತದೆ. ಈ ಬೆಡಗೂ ಸಮುದಾಯದಲ್ಲಿ ಶಾಂತಿ, ಸುವ್ಯವಸ್ಥೆಗಳನ್ನು ಕಾಪಾಡಿಕೊಂಡು ಹೋಗುವ "ಮಾಲಿ ಪಾಟೀಲರ" ಸ್ಥಾನಮಾನಗಳನ್ನು ಹೊಂದಿರುತ್ತಾರೆ 'ಬಾಂಗಿ' ಎಂಬ ಪದದ ಅರ್ಥವನ್ನು ನೋಡಿದ್ದಾಗ ಕಾವಡಿಕೋಲು 'ಪಾರ್ಸ್‌ಲು' ಎಂಬ ಅರ್ಥ ಸೂಚಿಸುತ್ತದೆ. ಅಂದರೆ, ಸಮುದಾಯದ ಸುಖ, ಶಾಂತಿ, ನೆಮ್ಮದಿಯ ಜೀವನದ ವಿಚಾರಗಳು ಹೊಂದಿರುವ 'ರಕ್ಷಕವಚ' ಎಂದು ಹೇಳಬಹುದು. ಸದ್ಯ ಗುಲ್ಬರ್ಗಾ ಜಿಲ್ಲೆಯ ಬೆಡಗುವಾರು ಮಾಹಿತಿ ನೋಡಿದಾಗ ಇವರಲ್ಲಿ ೫೧ ಕುಟುಂಬಗಳಿದ್ದು. ಜನಸಂಖ್ಯೆಯಲ್ಲಿ ಮೊದಲನೆಯ ಸ್ಥಾನದಲ್ಲಿದ್ದಾರೆ.

೨.೬. **ಪಚಮ/ಪಂಚಮಾಹಾಲು :** ಪಚಮ ಬೆಡಗಿನವರಿಗೆ ಸಮುದಾಯದಲ್ಲಿ ಆರನೆಯ ಸ್ಥಾನಮಾನಗಳನ್ನು ಕೊಡಲಾಗುತ್ತದೆ. ಮನು-ಮಯ-ತ್ವಷ್ಠಿ-ಶಿಲ್ಪಿ-ದೈವಜ್ಞ ಎಂಬ ಐದು ಜನ ದೈವೀ ಮಹಾಋುಷಿಗಳಲ್ಲಿ ಎಲ್ಲರಿಗಿಂತ ಕಿರಿಯನಾದವನು ದೈವಜ್ಞನು. ಐದನೆಯವನ್ನಾಗಿದ್ದಾನೆ. ಅಲ್ಲದೆ ಐದು ಆಸ್ಥಾನಗಳಲ್ಲಿ ದೈವಜ್ಞನ ಆಸ್ಥಾನವು ಕೂಡಾ ಒಂದಾಗಿದೆ. ಈ ಹಿನ್ನೆಲೆಯಲ್ಲಿ 'ಪಚಮೆ' ಎಂಬ ಬೆಡಗೂ ಹುಟ್ಟಿದೆ ಎಂದು ಹೇಳುತ್ತಾರೆ. ಈ ಬೆಡಗಿನವರಿಗೆ ಸಮುದಾಯದ ಎಲ್ಲ ಬೆಡಗಿನವರ ವರ್ತನೆಗಳನ್ನು ನೋಡುವಂತಹ "ಸರಪಂಚ"ನ ಸ್ಥಾನಮಾನಗಳನ್ನು ಕೊಡಲಾಗಿದೆ. 'ಪಂಚಮಹಾಲು'ಎಂಬ ಪದದ ಅರ್ಥವನ್ನು ನೋಡಿದಾಗ 'ಐದು ಅರಮನೆ' ಅಥವಾ 'ಐದು ತಂಗೂವ ಸ್ಥಳಗಳು' ಎಂಬ ಅರ್ಥ ಸೂಚಿಸುತ್ತದೆ. ಸದ್ಯ ಗುಲ್ಬರ್ಗಾ ಜಿಲ್ಲೆಯ ಈ ಸಮುದಾಯದ ಬೆಡಗುವಾರು ಮಾಹಿತಿ ನೋಡಿದಾಗ ಇವರ ಕುಟುಂಬಗಳು ೧೨ ಮಾತ್ರ ಇದ್ದು, ಕೊನೆಯ ಸ್ಥಾನದಲ್ಲಿದ್ದಾರೆ.

೨.೭. **ಮೂಕಲ್‌ವಾಡ್/ಮೂಕಲಾಜಿ :** ಮೂಕಲ್‌ವಾಡ್ ಬೆಡಗಿನವರಿಗೆ ಸಮುದಾಯದಲ್ಲಿ ಕೊನೆಯ ಸ್ಥಾನಮಾನಗಳನ್ನು ಕೊಡಲಾಗಿದೆ. ವಕ್ತೃಗಳು ಹೇಳುವ ಪ್ರಕಾರ, ಅಲೆಮಾರಿ ಸಮುದಾಯದವರಾದ ಬೈಲು ಪತ್ತಾರರು ಒಂದು ಸಲ ತಮ್ಮ ಹೆಣ್ಣು ಮಗುವನ್ನು ಒಂದು ಊರಿನಲ್ಲಿ ಮರೆತು ಹೋಗಿರುತ್ತಾರೆ. ಆ ಹೆಣ್ಣು ಮಗುವನ್ನು ಊರು ಕಾಯುವ ತಳವಾರನು ಸಾಕಿ ದೊಡ್ಡವಳಾದ ಮೇಲೆ ಮುಂದೆ ತನ್ನ ಮಗನಿಗೆ ವಿವಾಹ ಮಾಡುತ್ತಾನೆ. ಅವಳ ವಿವಾಹವಾದ ಮೇಲೆ ಆಕೆಗೆ ಮಕ್ಕಳು

ಹುಟ್ಟುತ್ತವೆ. ಕೆಲವು ದಿನಗಳು ಕಳೆದ ನಂತರ ಬೈಲು ಪತ್ತಾರರು ಅದೇ ಗ್ರಾಮಕ್ಕೆ ಪುನಃ ತಮ್ಮ ಪತ್ತಾರಿಕೆ ಕೆಲಸಗಳನ್ನು ಮಾಡುವುದಕ್ಕೆ ಬರುತ್ತಾರೆ. ಆಗ ಆ ಹೆಣ್ಣುಮಗಳನ್ನು ಬಿಟ್ಟು ಹೋದ ಮತ್ತು ಅವಳ ವಿವಾಹವಾದ, ವಿಚಾರವನ್ನು ತಳವಾರ ಬೈಲು ಪತ್ತಾರರಿಗೆ ತಿಳಿಸುತ್ತಾನೆ.

ಆಗ ಸಮುದಾಯದವರೆಲ್ಲರೂ ಸೇರಿ ಏನೂ ತಪ್ಪು ಮಾಡದ ಅವಳಿಗೆ ಮತ್ತು ಅವಳ ಮಕ್ಕಳಿಗೆ ತಮ್ಮ ಸಮುದಾಯದಲ್ಲಿ ಸೇರಿಸಿಕೊಳ್ಳುತ್ತಾರೆ. ಹೀಗಾಗಿ ಕೊನೆಯಲ್ಲಿ ಇವರೊಂದು ಹೊಸ ಬೆಡಗಿಗೆ ಜನ್ಮ ನೀಡುತ್ತಾರೆ. ಅಲ್ಲದೆ ಈ ಬೆಡಗಿನವರಿಗೆ ಯಾವ ಸ್ಥಾನಮಾನಗಳನ್ನು ಕೊಡದೆ ಮೂಕನಾಗಿರುವಂತೆ ಮಾಡಿರುವುದುರಿಂದ ಮೂಕಲಾಜಿ ಎಂಬ ಹೆಸರು ಬಂದಿರಬಹುದು.

ಮೂಕಲ್‌ವಾಡ್ ಬೆಡಗೂ ಹುಟ್ಟಿರುವ ಮಾಹಿತಿಯನ್ನು ಗುಲ್ಬರ್ಗಾ ಜಿಲ್ಲೆಯ ವಕ್ತೃ ಚುಡಾಮಣಿ ಹೀಗೆ ಹೇಳುತ್ತಾರೆ. ಗೌಡ್ಯ ಬೆಡಗಿನವರ ಹೆಣ್ಣು ಮಗಳು ಶ್ರೀಮಂತನಾದ ಈಡಿಗ ಸಮುದಾಯದ ಕಾರಯ್ಯನಿಗೆ ಪ್ರೇಮಿಸುತ್ತಾಳೆ ಆಗ ಈಡಿಗ ಸಮುದಾಯದವನಾದ ಕಾರಯ್ಯನು ಬೈಲುಪತ್ತಾರರ 'ಜಾತಿ ಪಂಚಾಯ್ತಿ' ಕರೆಸಿ ಸಮುದಾಯಕ್ಕೆ ದಂಡವನ್ನು ಕಟ್ಟಿ "ನಾನು ನಿಮ್ಮ ಸಮುದಾಯಕ್ಕೆ ಸೇರುತ್ತೇನೆ ಮತ್ತು ಪ್ರೇಮಿಸಿರುವ ಆಕೆಯನ್ನು ವಿವಾಹವಾಗುತ್ತೇನೆ" ಎಂದು ಹೇಳುತ್ತಾನೆ. ಆಗ ಬೈಲು ಪತ್ತಾರರೆಲ್ಲರೂ ಸೇರಿ ಈತನಿಗೆ ತಮ್ಮ ಸಮುದಾಯದಲ್ಲಿ ಸೇರಿಸಿಕೊಂಡ ಮೇಲೆ ವಿವಾಹ ಮಾಡುತ್ತಾರೆ. ಈಡಿಗನಾದವನು ಟೊಂಕಕ್ಕೆ ಮೂಕ ಕಟ್ಟಿಕೊಂಡು ಈಚಲ ಗಿಡಗಳನ್ನು ಏರುತ್ತಿರುತ್ತಾನೆ. ಹೀಗಾಗಿ ಈಡಿಗನಿಗೆ ಹುಟ್ಟಿದ ಮಕ್ಕಳಿಗೆ 'ಮೂಕಲ್‌ವಾಡ್' ಬೆಡಗಿನವರು ಎಂದು ಕರೆಯುತ್ತಾರೆ. ಅಲ್ಲದೆ ಈ ಬೆಡಗಿನವರು ಮಾತ್ರ ಮಗು ಹುಟ್ಟಿದ ಐದನೆ ದಿನಕ್ಕೆ 'ಸೈಟವಾಹಿ' ಪೂಜೆ ಮಾಡುವ ಸಂದರ್ಭದಲ್ಲಿ ಆಡಿನ ಬ್ಯಾಟಿ ಮಾಡುತ್ತಾರೆ. ಆಡಿನ ಬ್ಯಾಟಿ ಮಾಡುವಾಗ ಆಡಿನ ಕುತ್ತಿಗೆ ಕತ್ತರಿಸಿದ ತಕ್ಷಣ ಅದರ ಹೃದಯವನ್ನು ಕೈಯಿಂದ ತೆಗೆದು ಸೈಟವಾಹಿಯ ಮುಂದೆಯಿಟ್ಟು ಪೂಜೆ ಮಾಡುತ್ತಾರೆ. ಮತ್ತೇ ಮುಂಧೆ 'ಹಿರ್‌ಲ್' ಕಾರ್ಯಕ್ರಮದಲ್ಲಿ ಮತ್ತೊಂದು ಸಲ ಬ್ಯಾಟಿ ಮಾಡುವ ಪದ್ಧತಿ ಅನುಸರಿಸುತ್ತಾರೆ. ಈ ಮಗು ಹುಟ್ಟಿದ ಐದನೇ ದಿನಕ್ಕೆ ಬ್ಯಾಟಿ ಮಾಡುವುದರ ಉದ್ದೇಶ ಈ ಬೆಡಗಿನವರಿಗೆ ಕುಲಶುದ್ಧೀಕರಣದ ಹಿನ್ನೆಲೆ ಅನುಸರಿಸುವುದಾಗಿದೆ ಎಂದು ಮೇಲೆ ತಿಳಿಸುವ ವಕ್ತೃ ಹೇಳುತ್ತಾರೆ.

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಬೆಡಗುವಾರು ಮಾಹಿತಿಯನ್ನು ನೋಡಿದಾಗ ಇಡೀ ಗುಲ್ಬರ್ಗಾ ಜಿಲ್ಲೆಯಲ್ಲಿ ಈ ಬೆಡಗಿನವರ ಕುಟುಂಬಗಳು ೧೯ ಇದ್ದು, ಜನ ಸಂಖ್ಯೆಯಲ್ಲಿ ಐದನೆಯ ಸ್ಥಾನದಲ್ಲಿದ್ದಾರೆ.

## ೩. ವೈವಾಹಿಕ ಸ್ಥಾನಮಾನ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ವೈವಾಹಿಕ ಸ್ಥಾನಮಾನಗಳನ್ನು ನೋಡಿದಾಗ. ಇಡೀ ಜಿಲ್ಲೆಯಲ್ಲಿ ३೬೯ ಜನ ಪುರುಷರು, ३३೫ ಸ್ತ್ರೀಯರು ಒಟ್ಟು ೭೦೪ ಜನ ಅವಿವಾಹಿತರ ಸಂಖ್ಯೆ ಕಂಡು ಬರುತ್ತದೆ. ವಿವಾಹಿತರ ಸಂಖ್ಯೆ ನೋಡಿದಾಗ ೨೭೧ ಪುರುಷರು, ೨೮೩ ಸ್ತ್ರೀಯರು ಒಟ್ಟು

೫೫೪ ಜನ ವಿವಾಹಿತರಾಗಿದ್ದಾರೆ. ಇಲ್ಲಿ ವಿವಾಹಿತ ಸ್ತ್ರೀಯರ ಸಂಖ್ಯೆ ಹೆಚ್ಚಾಗಿರುವುದಕ್ಕೆ ಕಾರಣ, ಕೆಲವು ಪುರುಷರು ಇಬ್ಬರೂ ಹೆಂಡತಿಯರನ್ನು ಹೊಂದಿರುತ್ತಾರೆ. ಹೀಗಾಗಿ ಈ ಸಂಖ್ಯೆಗಳಲ್ಲಿ ಏರುಪೇರಾಗಿರುವುದು ಕಂಡು ಬರುತ್ತದೆ. ಕೊನೆಯದಾಗಿ ವಿಧುರರ ಸಂಖ್ಯೆ ೧೮, ವಿಧವೆಯರ ಸಂಖ್ಯೆ ೪೫ ಒಟ್ಟು ೬೩ ಜನರು ಇರುತ್ತಾರೆ ಎಂಬುದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದು ಬರುತ್ತದೆ.

### ೪. ಶೈಕ್ಷಣಿಕ ಸ್ಥಾನಮಾನ

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಶೈಕ್ಷಣಿಕ ಸ್ಥಾನಮಾನಗಳ ಮಾಹಿತಿಯನ್ನು ನೋಡಿದಾಗ ಒಟ್ಟು ಜಿಲ್ಲೆಯಲ್ಲಿ ೧,೨೪೮ ಜನರು ವಾಸಿಸುತ್ತಿದ್ದಾರೆ. ಇವರಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿರುವ ಗಂಡು ಮಕ್ಕಳ ಸಂಖ್ಯೆ ೫೭, ಹೆಣ್ಣುಮಕ್ಕಳ ಸಂಖ್ಯೆ ೪೨ ಒಟ್ಟು ೯೮ ವಿದ್ಯಾರ್ಥಿಗಳು. ಹಿರಿಯ ಪ್ರಾಥಮಿಕ ವರ್ಗದಲ್ಲಿ ಓದುತ್ತಿರುವ ಗಂಡು ಮಕ್ಕಳ ಸಂಖ್ಯೆ ೫೪, ಹೆಣ್ಣು ಮಕ್ಕಳ ಸಂಖ್ಯೆ ೧೧ ಒಟ್ಟು ೬೫ ವಿದ್ಯಾರ್ಥಿಗಳು. ಪ್ರೌಢಶಾಲೆಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ೬೨, ವಿದ್ಯಾರ್ಥಿನಿಯರ ಸಂಖ್ಯೆ ೭ ಒಟ್ಟು ೬೯ ವಿದ್ಯಾರ್ಥಿಗಳು ಇನ್ನೂ ಪದವಿ ಪೂರ್ವ ಕಾಲೇಜು ಹಂತದಲ್ಲಿ ವಿದ್ಯಾರ್ಥಿನಿಯರು ಇರುವುದಿಲ್ಲ ೧೫ ವಿದ್ಯಾರ್ಥಿಗಳು ಮಾತ್ರ ಇದ್ದಾರೆ. ಇಲ್ಲಿಯವರೆಗೆ ೪ ಜನ ಪುರುಷರು ಮಾತ್ರ ಪದವಿ ಮುಗಿಸಿಕೊಂಡಿದ್ದಾರೆ. ಇಡೀ ಜಿಲ್ಲೆಯಲ್ಲಿಯೇ ಬಿ.ಎಡ್.ಪದವಿ ಮುಗಿಸಿಕೊಂಡ ನಿರುದ್ಯೋಗಿ ಪದವಿದರ ಒಬ್ಬರೂ ಮತ್ತು ಟಿ.ಸಿ.ಎಚ್. ಮುಗಿಸಿಕೊಂಡಿರುವ ಮಹಿಳಾ ಶಿಕ್ಷಕಿ ಒಬ್ಬರು. ಸ್ನಾತಕೋತ್ತರ ಇನ್ನಿತರ ಯಾವುದೇ ಕೋರ್ಸ್‌ನಲ್ಲಿ ಯಾರು ಪದವಿ ಪಡೆದುಕೊಂಡಿಲ್ಲ.

### ೫. ಕೌಟುಂಬಿಕ ಜೀವನ

ಸಮಾಜಶಾಸ್ತ್ರಜ್ಞರು ಕುಟುಂಬವನ್ನು 'ವಿಭಕ್ತ ಕುಟುಂಬ' ಮತ್ತು 'ಅವಿಭಕ್ತ ಕುಟುಂಬ' ಎಂದು ಎರಡು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. ವಿಭಕ್ತ ಕುಟುಂಬದಲ್ಲಿ ಕೇವಲ ಗಂಡ ಹೆಂಡತಿ ಮಕ್ಕಳು ಮಾತ್ರ ಇದ್ದರೆ, ಅವಿಭಕ್ತ ಕುಟುಂಬದಲ್ಲಿ ತಂದೆ ತಾಯಿ ಮಕ್ಕಳು ಸೊಸೆಯಂದಿರು, ಮೊಮ್ಮಕ್ಕಳು ಹಾಗೂ ಇತರ ಸಂಬಂಧಿಗಳು ಒಟ್ಟಾಗಿ ಇರುತ್ತಾರೆ. ಬೈಲುಪತ್ತಾರರಲ್ಲಿ ಅವಿಭಕ್ತ ಕುಟುಂಬಗಳೇ ಅಧಿಕ, ಆದರೆ ಇತ್ತೀಚಿನ ದಿನಗಳಲ್ಲಿ ಇವರಲ್ಲಿಯೂ ಕೂಡ ವಿಭಕ್ತಕುಟುಂಬಗಳು ಹೆಚ್ಚಾಗಿ ರಚನೆಯಾಗುತ್ತಿರುವುದು ಕಂಡು ಬರುತ್ತದೆ. ಪಿತೃಪ್ರಧಾನ ವ್ಯವಸ್ಥೆಯನ್ನು ಹೊಂದಿರುವ ಇವರ ಕುಟುಂಬಗಳ ಜವಾಬ್ದಾರಿ ಮತ್ತು ಆಗುಹೋಗುಗಳನ್ನು ಯಜಮಾನನೇ ನೋಡಿಕೊಳ್ಳುತ್ತಾನೆ. ತಂದೆಯ ತರುವಾಯ ಮನೆಯ ಹಿರಿಯ ಮಗನೆ ಹಿರಿತನ ಮಾಡುತ್ತಾನೆ. ಒಂದು ವೇಳೆ ತಂದೆ ತೀರಿಕೊಂಡು, ಗಂಡು ಮಗ ಇರದಿದ್ದರೆ ಈ ಜವಾಬ್ದಾರಿಯನ್ನೆಲ್ಲ ಯಜಮಾನನ ಹೆಂಡತಿಯೇ ನೋಡಿಕೊಳ್ಳುವುದುಂಟು. ಹೆಣ್ಣು ಮಗಳಿಗೆ ಮದುವೆ ಮಾಡಿ ಕಳಿಸುವ ಮತ್ತು ಸೊಸೆಯನ್ನು ಕರೆತರುವ ಪದ್ಧತಿ ಇವರಲ್ಲಿದೆ. ವೃತ್ತಿಗೆ ಸಂಬಂಧಿಸಿದ ಸಾಮಾನುಗಳೆಲ್ಲವು ಗಂಡು ಮಕ್ಕಳಿಗೆ ಸೇರಿದ್ದು. ಮನೆಯಲ್ಲಿ ಅಣ್ಣನಾದ ವ್ಯಕ್ತಿ ತಮ್ಮನ ಹೆಂಡತಿಯೊಂದಿಗೆ

ಅವಶ್ಯವಿದ್ದಾಗ ಮಾತ್ರ ಮಾತನಾಡಬಹುದು. ಅವಳಿಗೆ ಮುಟ್ಟುವಂತಿಲ್ಲ. ಒಂದು ವೇಳೆ ಏನಾದರು ಬೇಕಾದರೆ ಆಕೆಗೆ ಕೇಳಿದಾಗ ಆಕೆ ಆ ವಸ್ತುಗಳನ್ನು ತಂದು ಇಟ್ಟು ಹೋಗುತ್ತಾಳೆ. ನಂತರ ಆ ವಸ್ತುಗಳನ್ನು ಆತ ಮುಟ್ಟಬಹುದು. ಕುಟುಂಬದಲ್ಲಿ ತಮ್ಮನಾದ ವ್ಯಕ್ತಿಗೆ ಇಂತಹ ನಿರ್ಬಂಧಗಳಿರುವುದಿಲ್ಲ. ಸೋದರ ಸೊಸೆಯಂದಿರೊಂದಿಗೆ ಸೋದರ ಮಾವಂದಿರು ವಿನೋದವಾದ ಹಾಸ್ಯಗಳನ್ನು ಮಾಡಬಹುದು. ಕುಟುಂಬದ ಆಸ್ತಿಯಲ್ಲಿ ಎಲ್ಲಾ ಮಕ್ಕಳಿಗೂ ಸಮನಾದ ಪಾಲು ಇರುತ್ತದೆ.

೫.೧. **ಆಹಾರ ಪದ್ಧತಿ :** ಬೈಲುಪತ್ತಾರರು ಮಾಂಸಹಾರಿಗಳು ಮತ್ತು ಸಸ್ಯಹಾರಿಗಳು. ಇವರು ಮೀನು, ಕುರಿ, ಆಡು, ಕೋಳಿ, ಮೊಲ, ಏಡಿ, ಕೌಜುಗ, ಆಮೆ, ಪಾರಿವಾಳಗಳ ಮಾಂಸವನ್ನು ತಿನ್ನುತ್ತಾರೆ. ಸಾಮಾನ್ಯವಾಗಿ ದಿನನಿತ್ಯ ರೊಟ್ಟಿ, ಬ್ಯಾಳಿ, ಕಾಯಿಪಲ್ಯೆಗಳನ್ನು ಊಟ ಮಾಡುತ್ತಾರೆ. ಇವರು ತಮ್ಮ ಬಿಡಾರಗಳ ಮುಂದೆ ಒಲೆ ಹೂಡಿ ಅಡವಿಯಲ್ಲಿ ಸಂಗ್ರಹಿಸಿದ ಕಟ್ಟಿಗೆಯಿಂದ ಅಡಿಗೆ ಮಾಡುತ್ತಾರೆ. ಅಲ್ಲದೆ ಇತರರು ಪ್ರೀತಿಯಿಂದ ಕೊಟ್ಟಂತಹ ರೊಟ್ಟಿ ಚಟ್ನಿಗಳನ್ನು ಕೂಡ ಊಟಮಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ ಗೋದಿಯ ಹುಗ್ಗಿ ಅಕ್ಕಿಯ ಹುಗ್ಗಿ, ಹೋಳಿಗೆ, ಸಜ್ಜಕ್, ಚಕ್ಕೋಲಿ, ಕಡಬು, ಹಪಳ ಸೆಂಡಿಗೆಗಳನ್ನು ಮಾಡುತ್ತಾರೆ. ಹಬ್ಬದ ಕರಿಯ ದಿನ ಮತ್ತು ಸಂಬಂಧಿಕರು ಬಂದಾಗ ಕುರಿ ಕೋಳಿಯನ್ನು ಕೊಯ್ದು ಹೆಂಡ ತಂದು ಕುಡಿದು ಕುಡಿಸಿ ಮಾಂಸದ ಊಟವನ್ನು ತಿಂದು ಸಂತೋಷವಾಗಿರುತ್ತಾರೆ.

೫.೨. **ಉಡುಗೆ ತೊಡುಗೆ :** ಬೈಲುಪತ್ತಾರರ ಪುರುಷರು ಸಾಮಾನ್ಯವಾಗಿ ಎಲ್ಲರು ಧರಿಸುವಂತಹ ಪಂಜೆ, ಟೋಪಿ, ಟಾವಲ್, ಬನಿಯನ್, ಪ್ಯಾಂಟು, ಶರ್ಟು, ಲುಂಗಿಗಳನ್ನು ಧರಿಸುತ್ತಾರೆ. ಯುವಕರು ಇತ್ತೀಚಿನ ಆಧುನಿಕ ಉಡುಗೆ ತೊಡುಗೆಗಳನ್ನು ತೊಡುತ್ತಾರೆ. ಕೆಲವು ಪುರುಷರು ಮುಂಗೈ ಕೈಯಲ್ಲಿ ಬೆಳ್ಳಿಯ ಕಡಗ, ಬೆರಳಿನಲ್ಲಿ ಬೆಳ್ಳಿಯ ಉಂಗುರಗಳನ್ನು ಧರಿಸುತ್ತಾರೆ. ಅಲೆದಾಡಿ ಸಾಮಾನುಗಳನ್ನು ಮಾರಾಟ ಮಾಡುವವರು ಹೆಗಲಿನಲ್ಲಿ ಚೀಲ ಹಾಕಿಕೊಳ್ಳುತ್ತಾರೆ. ಕಾಲಿನಲ್ಲಿ ಚಪ್ಪಲಿಗಳನ್ನು ಧರಿಸುತ್ತಾರೆ.

ಸ್ತ್ರೀಯರು ಕೂಡ ಸಾಮಾನ್ಯವಾಗಿ ಇತರ ಸಮುದಾಯದವರು ತೊಟ್ಟುಕೊಳ್ಳುವಂತಹ ಸೀರೆ, ಕುಪ್ಪಸಗಳನ್ನು ತೊಟ್ಟುಕೊಳ್ಳುತ್ತಾರೆ. ಹಿರಿಯರಾದ ಹೆಣ್ಣು ಮಕ್ಕಳು ಹಣೆಗೆ ಅಗಲವಾದ ಕುಂಕುಮವನ್ನು ಇಟ್ಟುಕೊಳ್ಳುತ್ತಾರೆ. ಚಿಕ್ಕವಯಸ್ಸಿನವರು ಸಣ್ಣ ಪ್ರಮಾಣದ ಕುಂಕುಮವನ್ನು ಹಚ್ಚಿಕೊಳ್ಳುತ್ತಾರೆ. ಕೈಯಲ್ಲಿ ಹೆಚ್ಚಾಗಿ ಹಸಿರು ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಮೂಗಿನಲ್ಲಿ ಮೂಗುತಿ, ಕಿವಿಯಲ್ಲಿ ಓಲೆಗಳನ್ನು ಧರಿಸುತ್ತಾರೆ. ಯುಗಾದಿ, ಮಹಾನವಮಿ, ನಾಗರ ಪಂಚಮಿ ಹಬ್ಬಗಳಲ್ಲಿ ಹೊಸ ಬಟ್ಟೆಗಳನ್ನು ಧರಿಸುತ್ತಾರೆ.

### ೬. ಆರ್ಥಿಕ ಜೀವನ

ಆರ್ಥಿಕ ಜೀವನವೆಂಬುದು ಒಬ್ಬ ವ್ಯಕ್ತಿಗೆ ಅನ್ವಯಿಸಿಕೊಂಡಾಗ ಆ ವ್ಯಕ್ತಿಯ ಶ್ರಮ ಉತ್ಪಾದನೆ

ಹಂಚಿಕೆ, ಅನುಭೋಗ ಅಂಶಗಳು ಒಳಗೊಂಡಿರುತ್ತವೆ. ಇದನ್ನೆ ಒಂದು ಸಮುದಾಯಕ್ಕೆ ಅನ್ವಯಿಸಿಕೊಂಡ ಆ ಸಮುದಾಯದ ಜೀವನ ವಿಧಾನ, ಉತ್ಪಾದನೆಯ ವಿವಿಧ ಆಕಾರಗಳು, ಜೀವನ ಮಟ್ಟ, ಸ್ಥಿತಿಗತಿಗಳು ಅವರು ಹೊಂದಿರುವ ಸಾಮಾಜಿಕ ಸ್ಥಾನಮಾನಗಳಂತಹ ಅಂಶಗಳು ಒಳಗೊಂಡಿರುತ್ತವೆ.

ಇಲ್ಲಿ ಬೈಲುಪತ್ತಾರ ಸಮುದಾಯದವರು ತಮ್ಮದೆಯಾದಂತಹ ಅಲೆಮಾರಿ ಪತ್ತಾರಿಕೆ ವೃತ್ತಿಯನ್ನು ಅವಲಂಬಿಸಿ ಜೀವನ ಮಾಡುವುದರೊಂದಿಗೆ, ಒಂದು ಕಾಲದಲ್ಲಿ ತಮ್ಮ ಮೂಲ ಅಲೆಮಾರಿ ಪತ್ತಾರಿಕೆಯಿಂದ ಸರಳ ಜೀವನ ಮಾಡುತ್ತಿದ್ದ ಇವರು ಇಂದಿನ ಆಧುನೀಕರಣ, ನಗರೀಕರಣ, ಕೈಗಾರಿಕರಣದಿಂದ ವಿವಿಧ ಮಾದರಿಯ ಅಲಂಕಾರಿಕ ಆಭರಣಗಳು ಮಾರುಕಟ್ಟೆಗೆ ಬರುತ್ತಿರುವುದರಿಂದ ಇವರು ತಯಾರಿಸಿದ ಅಲಂಕಾರಿಕ ಆಭರಣಗಳು ಇಂದು ಮೌಲ್ಯ ಕಳೆದುಕೊಳ್ಳುತ್ತಿವೆ. ಹೀಗಾಗಿ ದೈನಂದಿನ ಜೀವನಕ್ಕೆ ಬೇಕಾಗುವಷ್ಟು ಆದಾಯ ಸಿಗದೇ ಹೋಗುತ್ತಿರುವುದರಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವ ಇವರು ತಮ್ಮ ದೈಹಿಕ ಶ್ರಮವನ್ನು ಇತರರಿಗೆ ಮಾರಾಟ ಮಾಡಿ ಬಂದಂತಹ ಕೂಲಿ ಹಣದಿಂದ ಜೀವನ ಮಾಡುವುದು ಕಂಡುಬರುತ್ತದೆ. ಬರೀ ಅವಶ್ಯಕ ವಸ್ತುಗಳನ್ನು ಪಡೆಯಲು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವ ಈ ಸಮುದಾಯದವರು ವಿಲಾಸಿ ವಸ್ತುಗಳನ್ನು ಬಳಸುವುದು ಕನಸಿನ ಮಾತೆ ಸರಿ ಎಂದೂ ಹೇಳಬಹುದು.

೬.೧. **ಸಂಪ್ರದಾಯಿಕ ವೃತ್ತಿ :** ಬೈಲುಪತ್ತಾರರ ಸ್ತ್ರೀ ಪುರುಷರ ಪ್ರಮುಖ ವೃತ್ತಿ ಪತ್ತಾರಿಕೆ. ಇವರು ತಾಮ್ರ, ಹಿತ್ತಾಳೆ, ಕಂಚು, ಗಿಲಾಟಿ ಕಲ್ಲು, ಬೆಳ್ಳಿಗಳಿಂದ ವಿವಧ ರೀತಿಯ ಆಭರಣಗಳು, ಚಿಮಟಿಗೆ, ಹಲ್ಲುಕಡ್ಡಿ, ತಾಯತ, ಉಂಗುರ, ಓಲೆ, ಡಾಬ, ಕಾಲುಂಗುರಗಳನ್ನು ಹುಟ್ಟಿದ ಮಕ್ಕಳಿಗೆ ಕಾಲಿಗೆ ಹಾಕುವ ತಾಮ್ರದ ಹಾಲು ಕಡಗಗಳನ್ನು ಜನಸಾಮಾನ್ಯರಿಗೆ ಸಿಗುವಂತಹ ಸರಳ ಬೆಲೆಯಲ್ಲಿ ಆಭರಣಗಳನ್ನು ತಯಾರಿಸಿ ಊರಿಂದ ಊರಿಗೆ ಅಲೆದಾಡುತ್ತಾ ಮಾರಾಟ ಮಾಡುವ ಅಲೆಮಾರಿ ಸಂಪ್ರದಾಯಿಕ ವೃತ್ತಿಯನ್ನು ಅವಲಂಬಿಸಿದ್ದಾರೆ.

ಜನ ಸಾಮಾನ್ಯರ ಸೌಂದರ್ಯ ಕಾಪಾಡುವ ಆಭರಣಗಳನ್ನು ತಯಾರಿಸುತ್ತಾ, ಅಲಕ್ಷಿತ ಸಮುದಾಯದವರ ಸೌಂದರ್ಯ ಪ್ರಜ್ಞೆಯನ್ನು ಹೆಚ್ಚಿಸುತ್ತಾ ಅವರು ನಂಬಿರುವ ದೈವಗಳ ಮುಖಚಿತ್ರಗಳನ್ನು ತಾಯತ, ಉಂಗುರಗಳ ಮೇಲೆ ಹಚ್ಚುಹಾಕಿ ಅವರು ನಂಬಿರುವ ದೇವತೆ ಮತ್ತು ದೆವರುಗಳ ಸಂಪ್ರದಾಯಿಕ ನಂಬಿಕೆಯಲ್ಲಿನ ಮನಶಾಂತಿಯನ್ನು ಹೆಚ್ಚಿಸುತ್ತಾರೆ ಎಂದು ಹೇಳಬಹುದು.

ಜನ ಸಾಮಾನ್ಯರು ದುಡಿಯುವ ಕೆಲಸಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿರುತ್ತಾರೆ. ಇವರು ದುಡಿಯುವ ಸಂದರ್ಭದಲ್ಲಿ ಕೈ ಅಥವಾ ಕಾಲಿಗೆ ಮುಳ್ಳು ಚುಚ್ಚಿದಾಗ ಚಿಮಟಿಗೆಯಿಂದ ತೆಗೆದು ಕೊಳ್ಳುತ್ತಾರೆ. ಊಟ ಮಾಡುವ ಸಂದರ್ಭದಲ್ಲಿ ಹಲ್ಲಿನಲ್ಲಿ ಎನ್ನಾದರೂ ಸಿಕ್ಕಿಕೊಂಡಾಗ ಹಲ್ಲುಕಡಿ ಬಳಸಿ ತೆಗೆದುಕೊಳ್ಳುತ್ತಾರೆ. ದುಡಿಯುವ ಹೆಣ್ಣು ಮಕ್ಕಳು ಟೊಂಕಕ್ಕೆ ಡಾಬ ಕಟ್ಟುವುದರಿಂದ ದುಡಿಯುವ ಸಂದರ್ಭದಲ್ಲಿ ಸೀರೆಯು

ಜಾರದಂತೆ ಗಟ್ಟಿಯಾಗಿ ಡಾಬ ಹಿಡಿದುಕೊಂಡಿರುತ್ತದೆ. ಬೈಲುಪತ್ತಾರರು ತಯಾರಿಸಿದ ಸಾಮಾನುಗಳಿಗೆ ಶ್ರೀಮಂತರಿಗಿಂತ ಬಡವರಿಗೆ ಹೆಚ್ಚಿನ ಉಪಕಾರಿಯಾಗಿದೆ. ಹಾಗೆಯೇ ಬಡವ ಬಡವನಿಂದಲೇ ಬದುಕುವ ಜೀವನ ಬೈಲುಪತ್ತಾರ ಸಮುದಾಯದವರದ್ದಾಗಿದೆ ಎಂಬುದು ಸತ್ಯವನ್ನು ಸೂಚಿಸುತ್ತದೆ.

**೬.೨. ಕೃಷಿಕೂಲಿ :** ಜೀವನ ಸಾಗಿಸಲು ಉಳ್ಳದವರು ಉಳ್ಳವರ ಬಳಿ ದಿನವೊಂದಕ್ಕೆ ನಿಗದಿ ಪಡಿಸಿದ ಸಂಭಾವನೆಗಾಗಿ ಕೆಲಸಮಾಡುವುದೇ ಕೂಲಿ. ನಿರಂತರವಾಗಿ ಅಲೆಮಾರಿ ಜೀವನ ನಡಿಸುತ್ತಿದ್ದ ಬೈಲು ಪತ್ತಾರರು ಇತ್ತೀಚಿನ ದಿನಗಳಲ್ಲಿ ಹಲವಾರು ಗ್ರಾಮಗಳಲ್ಲಿ ನೆಲೆಸಿದ್ದಾರೆ ತಾವು ನೆಲೆಸಿರುವ ಗ್ರಾಮಗಳಲ್ಲಿ ಕೃಷಿ ಕೂಲಿಗಳಾಗಿ ಉಳ್ಳವರ ಹೊಲ, ಗದ್ದೆಗಳಲ್ಲಿ ಕೃಷಿಕೂಲಿಗಳಾಗಿ ದುಡಿದು ತಮ್ಮ ಉದರವನ್ನು ತುಂಬಿಕೊಳ್ಳುವುದರೊಂದಿಗೆ ಕೂಲಿ ಜೀವನ ನಡೆಸುತ್ತಿರುವುದು ಸಂಶೋಧನಾ ಕ್ಷೇತ್ರ ಕಾರ್ಯದಿಂದ ತಿಳಿದು ಬರುತ್ತದೆ.

**೬.೩. ಬೇವಿನ ಬೀಜ ಆರಿಸುವುದು :** ಯುಗಾದಿ ಮುಗಿದ ಮೇಲೆ ಬೆಸಿಗೆಯ ಕಾಲದಲ್ಲಿ ಹೆಚ್ಚಾಗಿ ಕೂಲಿ ಕೆಲಸಗಳು ಗ್ರಾಮಿಣ ಭಾಗಗಳಲ್ಲಿ ಸಿಗುವುದಿಲ್ಲ ಹೀಗಾಗಿ ದುಡಿದರೆ ಹೊಟ್ಟೆ ತುಂಬುವುದು ಎಂದು ತಿಳಿದಿರುವ ಈ ಸಮುದಾಯದವರು ಸ್ತ್ರೀಯರು ಮತ್ತು ಮಕ್ಕಳು ಮಾತ್ರ ಬುಟ್ಟಿ ಇಲ್ಲವೆ, ಡಬ್ಬಿಗಳನ್ನು ತೆಗೆದುಕೊಂಡು. ಹಳ್ಳ ಕೊಳ್ಳ, ಹೊಲ ಗದ್ದೆಗಳಲ್ಲಿ ರಸ್ತೆಗಳಲ್ಲಿರುವಂತಹ ಬೇವಿನ ಗಿಡಗಳನ್ನು ಹುಡುಕುತ್ತ ಬೀಜಗಳನ್ನು ಆರಿಸಿ ತಂದು ತಮ್ಮ ಮನೆಯ ಅಂಗಳದಲ್ಲಿ ರಾಶಿ ಹಾಕಿ ಒಂದು ದಿನ ಬೇವಿನ ಬೀಜದ ವ್ಯಾಪಾರಿಯೊಂದಿಗೆ ವ್ಯಾಪಾರದ ಮೌಲ್ಯವನ್ನು ನಿರ್ಧರಿಸಿಕೊಂಡು ಮಾರಾಟ ಮಾಡುವಂತಹ ವೃತ್ತಿಯನ್ನು ಕೂಡ ಅನುಸರಿಸುತ್ತಿದ್ದಾರೆ.

**೬.೪. ವೃತ್ತಿಕೂಲಿ :** ಕೆಲವು ನಗರಗಳ ಪ್ರದೇಶದಲ್ಲಿನ ಬೈಲುಪತ್ತಾರ ಸಮುದಾಯದವರು, ನಗರದಲ್ಲಿನ ಶೆಟ್ಟರ ಬೆಳ್ಳಿ ಬಂಗಾರದ ಅಂಗಡಿಗಳಲ್ಲಿ ಸಾಮಾನುಗಳನ್ನು ತಯಾರಿಸುವಂತಹ ಕೆಲಸಗಳನ್ನು ಮಾಡುವ ವೃತ್ತಿಕೂಲಿ ಆಳುಗಳಾಗಿ ಜೀವನ ನಡೆಸುವುದು ಕಂಡುಬರುತ್ತದೆ. ಶೆಟ್ಟರ ಅಂಗಡಿಗಳಲ್ಲಿ ಕೆಲಸಗಳಿದ್ದಾಗ ಮಾತ್ರ ಆ ದಿನ ಕೆಲಸಕ್ಕೆ ತೆಗೆದುಕೊಳ್ಳುತ್ತಾರೆ. ಶೆಟ್ಟರ ಅಂಗಡಿಯಲ್ಲಿ ಒಂದು ದಿನದ ಕೆಲಸಕ್ಕೆ ಕೂಲಿ ೫೦.೦೦ ರೂ. ಮಾತ್ರ. ಒಂದು ವೇಳೆ ವಾರದ ಕೆಲಸವಿದ್ದಾಗ ೩೦೦ ರೂಪಾಯಿಗಳನ್ನು ಕೊಡುತ್ತಾರೆ. ತಿಂಗಳು ಆಧಾರದ ಮೇಲೆ ಇವರನ್ನು ನೇಮಿಸಿಕೊಂಡರೆ ಅಂಗಡಿಲ್ಲಿ ಒಂದೊಂದು ಸಲ ಹೆಚ್ಚಿನ ಕೆಲಸವಿರಬಹುದು. ಇಲ್ಲವೆ ಕಡಿಮೆ ಕೆಲಸಗಳು ಇರಬಹುದು. ಇವರಿಗೆ ತಿಂಗಳಿಗೆ ೭೫೦ ರಿಂದ ೮೦೦ ರೂಪಾಯಿಗಳನ್ನು ಮಾತ್ರ ಕೊಡುತ್ತಾರೆ. ಹೀಗಾಗಿ ಇವರಿಗೆ ಪೂರ್ಣ ಪ್ರಮಾಣದ ಕೂಲಿ ಕೆಲಸಗಳನ್ನು ಕೂಡ ಸಿಗುವುದು ಕಠಿಣವಾಗಿದೆ.

**೬.೫. ಕಾಗದ ಆರಿಸುವುದು :** ನಗರ ಪ್ರದೇಶಗಳಲ್ಲಿ ಬೈಲುಪತ್ತಾರ ಸಮುದಾಯದ ಮಕ್ಕಳು ಕಾಗದ ಚೂರುಗಳನ್ನು ಆರಿಸುವ ಕೆಲಸಗಳನ್ನು ಮಾಡುತ್ತಾರೆ. ಮಕ್ಕಳು ಊಟ ಮಾಡಿಕೊಂಡು ಹೆಗಲಿಗೆ ಜೋಳಿಗೆ

ಹಾಕಿಕೊಂಡು ನಗರದ ಬಡಾವಣೆಗಳ ನಾಲೆಗಳಲ್ಲಿ ಕೊಳಚೆ ಪ್ರದೇಶಗಳಲ್ಲಿ ಬಿದ್ದಿರುವಂತಹ ಕಾಗದದ ಚೂರುಗಳನ್ನು ಬಿಸಿಲು, ಮಳೆ, ಚಳಿ ಎನ್ನದೆ ಆರಿಸಿಕೊಂಡು ಬಂದು ಮಾರಾಟ ಮಾಡಿ ಬಂದಂತಹ ೧೦ ಅಥವಾ ೧೫ ರೂಪಾಯಿಗಳನ್ನು ತಂದೆ ತಾಯಿಗಳ ಕೈಯಲ್ಲಿ ಕೊಡುವುದರೊಂದಿಗೆ ತಮ್ಮ ಕುಟುಂಬದ ಹಿರಿಯರಿಗೆ ಅಲ್ಪ ಪ್ರಮಾಣದ ಸಹಾಯ ಮಾಡುತ್ತಾರೆ.

**೬.೬. ತಯಾರಿಸಿದ ವಸ್ತುಗಳನ್ನು ಮಾರಾಟ ಮಾಡುವುದು :** ನಿರಂತರ ಅಲೆಮಾರಿಗಳಾಗಿದ್ದ ಬೈಲುಪತ್ತಾರರು ತೀರಾ ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ನೆಲೆನಿಂತು ಸಾಮಾನುಗಳನ್ನು ತಯಾರಿಸಿ ಸುತ್ತಲಿನ ಗ್ರಾಮಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಅಲ್ಲದೆ ಜಾತ್ರೆ ಸಂತೆಗಳಿಗೂ ಹೋಗಿ ಮಾರಾಟ ಮಾಡುತ್ತಾರೆ. ಅಂದರೆ ಇತ್ತೀಚಿನ ದಿನಗಳಲ್ಲಿ ಇವರು ಅರೆ ಅಲೆಮಾರಿ ಜೀವನ ಮಾಡುವುದು ಕಂಡುಬರುತ್ತದೆ.

ನಗರ ಪ್ರದೇಶದಲ್ಲಿನ ಬೈಲುಪತ್ತಾರರು ಕೊಳಚೆ ಪ್ರದೇಶದಲ್ಲಿ ವಾಸವಾಗಿದ್ದು ತಾವು ತಯಾರಿಸಿದ ಅಲಂಕಾರಕ ಆಭರಣಗಳನ್ನು ನಗರದ ಮುಖ್ಯರಸ್ತೆಗಳಲ್ಲಿ, ರೈಲ್ವೆ ನಿಲ್ದಾಣಗಳಲ್ಲಿ, ಬಸ್‌ನಿಲ್ದಾಣಗಳಲ್ಲಿ, ಚಿತ್ರಮಂದಿರಗಳ ಸಮೀಪದಲ್ಲಿ ಕುಳಿತುಕೊಂಡು ಮಾರಾಟ ಮಾಡುತ್ತಾರೆ. ಚಿಕ್ಕಮಕ್ಕಳು ನಗರದ ವಿವಿಧ ಪ್ರದೇಶಗಳಲ್ಲಿ ಅಲೆದಾಡುತ್ತಾ ಮಾರಾಟ ಮಾಡುವುದು ಕಂಡುಬರುತ್ತದೆ.

## ಆಧಾರಗಳು


೧. Jan Brouwer., The Makers of the World (Bombay : Oxford University Press, 1995) p.379

೨. ಶಂಕರ್ ರಾವ್, ಚ.ನ., **ಸಮಾಜ ಶಾಸ್ತ್ರೀ ಪರಿಚಯ** (ಜೈ ಭಾರತ ಪ್ರಕಾಶನ್ : ೧೯೯೫)


## ಬೈಲುಪತ್ತಾರರ ವಕ್ತೃಗಳು

| ಹೆಸರು | ಬೆಡಗು | ಊರು | ವಯಸ್ಸು |
|---|---|---|---|
| ಲಚಮಣ್ಣಾ ತಂದೆ ಹುಸೇನಪ್ಪ | ಕಬಸ್ತೋಡ್ | ಹತ್ತಿಕುಣಿ | ೬೦ |
| ರಮೇಶ ತಂದೆ ಮಾನಪ್ಪಾ | ಮೂಕಲ್‌ವಾಡ್ | ಹುಣಸಗಿ | ೩೦ |
| ಶಾಂತಪ್ಪ ತಂದೆ ಮಾನಪ್ಪ | ಸಫೋಡ್ | ಖಾನಾಪುರ | ೩೮ |
| ಜಗನ್ನಾಥ ತಂದೆ ಮಹಾದೇವಪ್ಪ | ಬಂಜೋಡ್ | ಹತ್ತಿಕುಣಿ | ೩೦ |
| ಚಂದಪ್ಪ ತಂದೆ ಎಲ್ಲಪ್ಪ | ಕಬಸ್ತೋಡ್ | ಯಾದಗಿರಿ | ೬೫ |
| ಚುಡಾಮಣಿ ತಂದೆ ರಾಮಚಂದ್ರಪ್ಪ | ಮೂಕಲವಾಡ್ | ಗುಲ್ಬರ್ಗಾ | ೬೫ |

# ಅಧ್ಯಾಯ ೪

# ಆಚರಣೆಗಳು

೧. ಜೀವನಾವರ್ತನ ಆಚರಣೆಗಳು

ಅ. ಜನನ ಸಂಸ್ಕಾರ

ಆ. ಜಾವಳ ಕಾರ್ಯಕ್ರಮ

ಇ. ಬಾಂಡ್ರಿಕೂಡಿ (ಜನಿವಾರ) ಸಂಸ್ಕಾರ

ಈ. ಬಡಮನಿಂ (ಋತುಮತಿ) ಸಂಸ್ಕಾರ

ಉ. ಗಟ್ಟಿಕಾರ್ಯ (ನಿಶ್ಚಿತಾರ್ಥ)

ಊ. ಸಂಗಾ (ವಿವಾಹ) ಸಂಸ್ಕಾರ

ಋ. ಸಡಾಬಾಟ್ (ವಿಚ್ಛೆದನೆ) ಸಂಸ್ಕಾರ

ೠ. ದರಾ (ಹುಡುಕಿ) ಮದುವೆ

ಎ. ಪೂಟ್‌ಮುಟ್ಟ (ಶವ) ಸಂಸ್ಕಾರ

೨. ವಾರ್ಷಿಕಾವರ್ತನ ಆಚರಣೆಗಳು

ಅ. ಹಬ್ಬಗಳು

ಆ. ದೈವ ಮತ್ತು ಜಾತ್ರೆಗಳು

೩. ಕುಲ ಪಂಚಾಯ್ತಿ

# ೪. ಆಚರಣೆಗಳು

## ೧. ಜೀವನಾವರ್ತನ ಆಚರಣೆಗಳು

ಮಾನವನ ಹುಟ್ಟಿನಿಂದ ಸಾವಿನವರೆಗಿನ ನಡುವಿನ ಅಂತರದಲ್ಲಿ ಅನೇಕ ಆಚರಣೆಗಳನ್ನು ಅನುಸರಿಸಲೇಬೆಂಕೆಂಬ ಸಂಪ್ರದಾಯಗಳು ಹೆಚ್ಚು ಕಡಿಮೆ ಎಲ್ಲ ಸಮುದಾಯಗಳಲ್ಲಿ ಕಂಡು ಬರುತ್ತವೆ ಅಲ್ಲದೆ ಅವುಗಳನ್ನು ಅನುಸರಿಸುವ ಅನಿವಾರ್ಯತೆಯು ಕೂಡ ಇರುತ್ತದೆ. ಬೈಲುಪತ್ತಾರರು ಕೂಡ ತಮ್ಮ ಅಲೆಮಾರಿ ಜೀವನದ ನೋವು ನಲಿವುಗಳೆನ್ನೆಯಿರಲಿ ಅವುಗಳನ್ನು ನುಂಗಿ ಮತ್ತು ಆಧುನೀಕರಣ, ಕೈಗಾರಿಕರಣ, ನಗರೀಕರಣದ ಜಗತ್ತಿನ ಸಂಘರ್ಷದ ಬದುಕಿನ ಜೀವನದಲ್ಲಿ ತಮ್ಮದೆಯಾದಂತಹ ವಿವಿಧ ರೀತಿಯ ಜೀವನಾವರ್ತನ ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ.

### ಅ. ಜನನ ಸಂಸ್ಕಾರ

ಬೈಲು ಪತ್ತಾರರ ಜೀವನಾವರ್ತನ ಆಚರಣೆಗಳಲ್ಲಿ ಜನನ ಸಂಸ್ಕಾರ ಸಂದರ್ಭದಲ್ಲಿ ವಿಧಿ ವಿಧಾನಗಳು ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಸಮುದಾಯದಲ್ಲಿ ಗರ್ಭಿಣಿ ಸ್ತ್ರೀಗೆ ಹೆರಿಗೆಯಾದ ಮೇಲೆ ತಮ್ಮ ಗುಡಿಸಲು ಅಥವಾ ಗುಡಾರಗಳಲ್ಲಿಯೇ ಹಳೆಯ, ಬಟ್ಟೆಗಳಿಂದ ಇಲ್ಲವೆ ಕಂಬಳಿಯಿಂದ ಪ್ರತ್ಯೇಕವಾದ ವ್ಯವಸ್ಥೆಯನ್ನು ಮಾಡಿ, ಈ ಸಂದರ್ಭದಲ್ಲಿ ಹೆಚ್ಚಿನ ಮಡಿ ಮೈಲಿಗೆಯನ್ನು ಆಚರಣೆ ಮಾಡಲಾಗುತ್ತದೆ. ಅಲ್ಲದೆ ಬಾಣಂತಿಯ ಹತ್ತಿರ ಕುಟುಂಬದಲ್ಲಿನ ಹಿರಿಯರಾದ ಸ್ತ್ರೀಯರು ಮತ್ತು ನುರಿತ ಸೂಲಗಿತಿಯರು ಮಾತ್ರ ಹೋಗಿ ಉಪಚಾರ ಮಾಡುತ್ತಾರೆ.

ಮಗು ಹುಟ್ಟಿದ ತಕ್ಷಣ ಮಗುವಿನ ಮಾಸನ್ನು ಕುಂಬಾರನ ಮನೆಯಿಂದ ತಂದ ಮಡಿಕೆಯಲ್ಲಿ ತುಂಬಿ ಮೇಲೊಂದು ಮುಚ್ಚಳವನ್ನು ಮುಚ್ಚುವಾಗ ಜೀವನಾವಶ್ಯಕ ವಸ್ತುಗಳಾದ ದವಸ ಧಾನ್ಯಗಳನ್ನು ಹಾಕಿ ಆ ಮಡಿಕೆಯನ್ನು ಬಚ್ಚಲಿನ ಕೆಳಗೆ ಹೂಳುತ್ತಾರೆ. ಐದನೆ ದಿನಕ್ಕೆ 'ಸೆಟವಾಯಿ' ಎಂಬ ಸೆಟಿಗೆಮ್ಮನ ಪೂಜೆ ಮಾಡುವಾಗ ಬಚ್ಚಲಿನ ಮೇಲೆ ಒಂದು ಅಥವಾ ಎರಡು ಸಣ್ಣ ಕಲ್ಲುಗಳನಿಟ್ಟು ಅದಕ್ಕೆ ಕುಂಕುಮ ಭಂಡಾರ ಎಲೆ ಅಡಿಕೆ ಹೂಗಳನಿಟ್ಟು 'ಸೆಟವಾಯಿ'ಯ ಪೂಜೆ ಕೊನೆಗೊಳಿಸುತ್ತಾರೆ.

ನಂತರ ಒಂಬತ್ತನೇ ದಿನಕ್ಕೆ ಮಗು ಹೆಣ್ಣಾಗಲ್ಲಿ ಇಲ್ಲವೆ ಗಂಡಾಗಲ್ಲಿ ಆ ಮಗುವಿಗೆ ನಾಮಕಾರಣ ಮಾಡುತ್ತಾರೆ. ಈ ನಾಮಕರಣ ಮಾಡುವ ದಿನ ಏನಾದರೂ ಸಿಹಿ ಊಟ ಮಾಡಿಸಿ ಮಗುವಿನ







ಸೋದರತ್ತೆ ಅಥವಾ ಸೋದರಮಾವನ ಮೂಲಕ ಹೆಸರಿಡಲಾಗುತ್ತದೆ. ಈ ನಾಮಕರಣ ಪದ್ಧತಿಗೆ "ದುಲ್ಲಿ" ಕಾರ್ಯಕ್ರಮ ಎಂದು ಕರೆಯುತ್ತಾರೆ. ಕೊನೆಯಲ್ಲಿ ಸೂಲಗಿತ್ತಿಗೆ ಸೀರೆ ಕುಪ್ಪಸ ದವಸಧಾನ್ಯಗಳನ್ನು ಉಡಿ ತುಂಬಿ ಕಳಿಸಲಾಗುತ್ತದೆ.

**ಪೂಲ್ಡ್ ಅಥವಾ ಹಿರಲ್ ಕಾರ್ಯಕ್ರಮ :** ಮಗೂ ಹುಟ್ಟಿದ ಒಂದು ತಿಂಗಳ ಒಳ್ಳಗಾಗಿ 'ಪೂಲ್ಡ್' ಅಥವಾ 'ಹಿರಲ್' ಎಂಬ ಇನ್ನೊಂದು ಕಾರ್ಯಕ್ರಮವನ್ನು ನೇರವೇರಿಸುವ ಸಂಪ್ರದಾಯ ರೂಢಿಯಲ್ಲಿದೆ. ಈ 'ಪೂಲ್ಡ್' ಅಥವಾ 'ಹಿರಲ್' ಕಾರ್ಯಕ್ರಮಕ್ಕೆ ಗಂಡನ ಮನೆಯ ಬೆಡಗಿನವರು ಮತ್ತು ಮಗುವಿನ ತಾಯಿಯ ತವರು ಮನೆಯ ಬೆಡಗಿನವರನ್ನು ಬಿಟ್ಟು ಸಮುದಾಯದಲ್ಲಿನ ಕನಿಷ್ಠ ಯಾವುದಾದರೂ ಮೂರು ಬೆಡಗಿನವರಿಗೆ ಹಿರಲ್ ಚಾಜದ ಆಮಂತ್ರಣಕ್ಕೆ ಕರೆಸುವ ಪದ್ಧತಿ ರೂಢಿಯಲ್ಲಿದೆ. ಈ ಹಿರಲ್ ಕಾರ್ಯಕ್ರಮಕ್ಕೆ ಬಡವರಾಗಿರಲ್ಲಿ ಇಲ್ಲವೇ ಸ್ಥಿತಿವಂತರಾಗಿರಲ್ಲಿ ಆಡಿನ 'ಬ್ಯಾಟಿ'ಯನ್ನು ಮಾಡಲೇಬೇಕೆಂಬ ಸಂಪ್ರದಾಯ ಅನುಸರಿಸುತ್ತಾರೆ. ಈ ಹಿರಲ್ ನೇರವೇರಿಸುವ ವ್ಯಕ್ತಿಯ ಅಂಗಳದಲ್ಲಿ 'ಬ್ಯಾಟಿ' ಮಾಡುವ ಆಡನು ತಂದು ಕತ್ತರಿಸಲಾಗುತ್ತದೆ. ಬ್ಯಾಟಿಯ ರಕ್ತದ ತಿಲಕವನ್ನು ದೇವರಿಗೆ ಅರ್ಪಿಸಿದ ಮೇಲೆ ಆಡಿನ ಮಾಂಸವನ್ನು ಸಮುದಾಯದ ಪದ್ಧತಿಯಂತೆ ಬಂದಂತಹ ಎಲ್ಲಾ ಬೆಡಗಿನವರಿಗೆ ಸಮಪಾಲು ಹಂಚಲಾಗುತ್ತದೆ.

ಈ ಸಂದರ್ಭದಲ್ಲಿ ಹೆಣ್ಣಾಗಲಿ ಇಲ್ಲವೆ ಗಂಡಾಗಲಿ ಯಾವುದೇ ಬೇದ ಭಾವವಿಲ್ಲದೆ ಮದುವೆಯಾದವರಿಗೆ ಒಂದು ಸಂಪೂರ್ಣ ಪಾಲು. ಬಾಂಡ್ರಿಕೊಡಿ (ಮುಂಜಿ)ಯಾದವರಿಗೆ ಅರ್ಧಪಾಲು, ಬಾಂಡ್ರಿಕೊಡಿಯಾಗದೇ ಇದ್ದವರಿಗೆ ಕಾಲುಭಾಗ ಪಾಲು ಹಂಚಲಾಗುತ್ತದೆ. ಪಾಲು ಹಂಚಿದ ಮೇಲೆ ತಮ್ಮ ಪಾಲಿಗೆ ಬಂದಂತಹ ಮಾಂಸವನ್ನು ತೆಗೆದುಕೊಂಡು ತಮ್ಮ ಮನೆಗಳಿಗೆ ಹೋಗುತ್ತಾರೆ ಎಂದು ವಕ್ತೃಗಳು ಹೇಳುತ್ತಾರೆ.

ಈ ಮೇಲಿನ ಪದ್ಧತಿಯ ಆಚರಣೆಗಳನ್ನು ನೋಡಿದಾಗ ಸಮುದಾಯವು ಪುರಾತನವಾದ ಆದಿವಾಸಿ ಜನಾಂಗಗಳು ಬೇಟೆಯಾಡಿದ ನಂತರ, ಸಮಪಾಲು ಹಂಚಿಕೊಂಡು ತಿನ್ನುವಂತಹ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಅಲ್ಲದೆ ಆ ಸಂಸ್ಕೃತಿಯನ್ನು ಆಚರಣೆಯ ರೂಪದಲ್ಲಿ ಇನ್ನು ಜೀವಂತವಾಗಿರುವುದು ಸಮುದಾಯದ ಈ ಪದ್ಧತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಕಂಡು ಬರುತ್ತದೆ.

### ಆ. ಜಾವಳ ಕಾರ್ಯಕ್ರಮ

ಬೈಲುಪತ್ತಾರರು ಹುಟ್ಟಿದ ಮಗು ಹೆಣ್ಣಾಗಲಿ ಇಲ್ಲವೆ ಗಂಡಾಗಲ್ಲಿ ಮೊದಲನೆ ಸಲ ಕೂದಲು ಕತ್ತರಿಸುವ ಜಾವಳ ಪದ್ಧತಿಯನ್ನು ಅನುಸರಿಸುವ ಸಂಪ್ರದಾಯ ರೂಢಿಯಲ್ಲಿದೆ. ಇವರು ಜಾವಳ ತೆಗೆಯುವ ಒಳ್ಳೆಯ ದಿನವನ್ನು ನೋಡಿ ಮಗುವಿನ ಸೋದರ ಮಾವನಿಗೆ ಕರೆಸಿ ಆತನ ಮೂಲಕವೇ ಜವಳಾ ತೆಗೆಸುವ ಪದ್ಧತಿಯನ್ನು ಅನುಸರಿಸುತ್ತಾರೆ. ಸೋದರ ಮಾವನು ಜಾವಳ ತೆಗೆಯುವ

ಸಂಧರ್ಭದಲ್ಲಿ ಕೊಬ್ರಿ, ವಿಳ್ಯೇದಲೆ, ಉತ್ತತ್ತಿ, ಅಡಿಕೆಗಳನ್ನು ತೆಗೆದುಕೊಂಡು, ಅಕ್ಕಿಯ ಹಾಸಿಗೆ ಬರೆದು ಕತ್ತರಿಯನ್ನು ಇಟ್ಟು ಕುಂಕಮು, ಬಂಡಾರ, ಹೂ, ಗಂಧಗಳಿಂದ ಕತ್ತರಿಗೆ ಪೂಜೆ ಸಲ್ಲಿಸುವಾಗ ತಾಯಿಯಾದವಳು ಆತನ ಎದುರಿನಲ್ಲಿ ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಂಡು ಕುಳಿತಿರುತ್ತಾಳೆ. ಆಗ ಸೋದರ ಮಾವನು ಮಗುವಿನ ಹಣೆಗೆ ಕುಂಕುಮದ ತಿಲಕವನ್ನಿಟ್ಟು ಮಗುವಿನ ತಲೆಯ ಬಲ ಭಾಗದಲ್ಲಿ ಮೂರು ಕಡೆ, ಎಡಭಾಗದಲ್ಲಿ ಎರಡು ಕಡೆ ಕೂದಲನ್ನು ಕತ್ತರಿಸಿ ತಾಯಿಯ ಉಡೆಯಲ್ಲಿ ಇಡುವ ಮೂಲಕ ಜಾವಳ ಕಾರ್ಯಕ್ರಮ ಮುಗಿಸುವ ಸಂಪ್ರದಾಯ ಅನುಸರಿಸುತ್ತಾರೆ. ಒಂದು ವೇಳೆ ಇವರು ತಾವು ನಂಬಿರುವ ದೇವರಿಗೆ ಅಲ್ಲಿಗೆ ಬಂದು ಜಾವಳ ತೆಗೆಸುತ್ತೇವೆ ಎಂದು ಹರಕೆ ಹೊತ್ತುಕೊಂಡಿದ್ದರೆ. ಆ ದೇವರ ಗುಡಿಗೆ ಹೋಗಿ ಅಲ್ಲಿಯೂ ಕೂಡಾ ಪೂಜಾರಿಗಳಿಂದ ಈ ಕಾರ್ಯಕ್ರಮ ಮಾಡಿಸುವುದಿಲ್ಲ. ಆದರೆ ಪೂಜಾರಿಯ ಚಾಜವನ್ನು ಕೊಟ್ಟು ಮಗೂವಿನ ಸೋದರ ಮಾವನ ಮೂಲಕವೇ ಜಾವಳ ತೆಗೆಯುವ ಸಂಪ್ರದಾಯ ಅನುಸರಿಸುತ್ತಾರೆ.

ಸಮುದಾಯದಲ್ಲಿ ಸೋದರ ಮಾವನಿಂದಲೇ ಜಾವಳ ತೆಗೆಸುವ ಸಂಪ್ರದಾಯದ ಹಿನ್ನಲೆಯನ್ನು ನೋಡಿದಾಗ ಮಗುವಿನ ಮೇಲೆ ಭಾವನಾತ್ಮಕ ಪ್ರೀತಿ ಇರುವ ಸೋದರ ಮಾವನ್ನು ಕತ್ತರಿಯಿಂದ ಕೂದಲನ್ನು ಕತ್ತರಿಸುವಾಗ ಬಹಳ ಎಚ್ಚರಿಕೆಯಿಂದ ಮಗುವಿಗೆ ಯಾವ ತೊಂದಿರೆ ಯಾಗದಂತೆ ಕತ್ತರುಸತ್ತಾನೆ ಎಂಬ ನಂಬಿಕೆ ಇವರಲ್ಲಿರಬಹುದು.

**ಇ. ಬಾಂಡ್ರಿಕೊಡಿ (ಜನಿವಾರ) ಸಂಸ್ಕಾರ**

ಬೈಲುಪತ್ತಾರರಲ್ಲಿ ಹಲವಾರು ಸಂಸ್ಕಾರಗಳಲ್ಲಿ ಬಾಂಡ್ರಿಕೊಡಿ ಸಂಸ್ಕಾರವು ಕೂಡಾ ತನ್ನದೆಯಾದಂತಹ ವಿವಿಧ ವಿಧಿ ವಿಧಾನಗಳನ್ನು ಹೊಂದಿರುತ್ತದೆ. ಇವರ ಸಮುದಾಯದಲ್ಲಿ ಹೆಣ್ಣು ಮಕ್ಕಳನ್ನು ಹೊರತ್ತುಪಡಿಸಿ, ಎಲ್ಲಾ ಗಂಡು ಮಕ್ಕಳಿಗೆ ಹೆಚ್ಚು ಕಡಿಮೆ ಕನಿಷ್ಠ ಆರುವರ್ಷದಿಂದ ಹದಿನಾರು ವರ್ಷಗಳ ಒಳಗಡೆ ಬಾಂಡ್ರಿಕೊಡಿ ಎಂಬ ಜನಿವಾರ ಹಾಕುವ ಕಾರ್ಯಕ್ರಮವನ್ನು ನೆರವೆರಸಲೇಬೇಕೆಂಬ ಸಂಪ್ರದಾಯ ರೂಢಿಯಲ್ಲಿದೆ. ಈ ಬ್ರಾಂಡಿಕೊಡಿ ಕಾರ್ಯಕ್ರಮಕ್ಕೆ ಕನಿಷ್ಠ ಯಾವುದಾದರು ಮೂರು ಬೆಡಗಿನ ಸಮುದಾಯದವರನ್ನು ಆಮಂತ್ರಿಸಲೇಬೇಕು ಎಂದು ವಕ್ತೃಗಳು ಹೇಳುತ್ತಾರೆ. ಇವರಲ್ಲಿ ಯಾವುದಾದರೊಂದು ಬೆಡಗಿನ ಒಬ್ಬ ವ್ಯಕ್ತಿಗೆ "ರಾಮ ರಾಮಕಿ" ಎಂದು ನೆಮಿಸಲಾಗುತ್ತದೆ. ಈ ರಾಮರಾಮಕಿಯು ಈ ಸಂದರ್ಭದಲ್ಲಿ ಚಾಜಗಳನ್ನು ಪಡೆಯುವುದಕ್ಕಾಗಿ ಇರುತ್ತಾನೆ.

ಇನ್ನೊಂದು ಯಾವುದಾದರೂ ಬೇರೆ ಬೆಡಗಿನ ಒಬ್ಬ ವ್ಯಕ್ತಿಗೆ ಜನಿವಾರ ಹಾಕಿಕೊಳ್ಳುವ ಹುಡುಗನ ಪಕ್ಕದಲ್ಲಿ ಸಂಪ್ರದಾಯದ ಪ್ರಕಾರ ಕುಳಿತ್ತಿರುತ್ತಾನೆ. ಈ ಪಕ್ಕದಲ್ಲಿ ಕುಳಿತುಕೊಂಡ ವ್ಯಕ್ತಿಗೆ 'ಕರೋಲಿ' ಎಂದು ಕರೆಯಲಾಗುತ್ತದೆ. ಇವನು ಜನಿವಾರ ಹಾಕಿಕೊಳ್ಳುವ ಹುಡುಗನಿಗೆ ಎಲ್ಲಾ ರೀತಿಯ ಸಹಾಯ ಸಹಕಾರಗಳನ್ನು ಮಾಡುತ್ತಾ ಪಕ್ಕದಲ್ಲಿಯೇ ಕುಳಿತುಕೊಂಡು ಚಾಜ ಮಾಡುತ್ತಿರುತ್ತಾನೆ.

ನಂತರ ಮತ್ತೊಂದು ಬೆಡಗಿನ ಯಾವುದಾದರೂ ಒಬ್ಬ ವ್ಯಕ್ತಿ ಜನಿವಾರ ಹಾಕಿಕೊಳ್ಳುವ ಹುಡಗನ ಎದುರಿನಲ್ಲಿ ನಿಂತಿರುತ್ತಾನೆ. ಇವನಿಗೆ 'ಬಂತ್ರೂಗ' ಎಂದು ಕರೆಯುತ್ತಾರೆ. ಆ ವ್ಯಕ್ತಿ ಜನಿವಾರ ಹಾಕಿಕೊಳ್ಳುವ ಹುಡುಗನಿಂದ ಒಂದು ರೂಪಾಯಿ ನಾಣ್ಯವನ್ನು ತೆಗೆದುಕೊಂಡು, ಆ ವ್ಯಕ್ತಿ ಬಂದಂತಹ ಸಮುದಾಯದ ಎಲ್ಲರಿಗೂ ತೋರಿಸಿ 'ರಾಮ ರಾಮಕೀಯ' ಕೈಯಲ್ಲಿ ಕೊಡುತ್ತಾನೆ. ನಂತರ ಆ ಹುಡುಗನಿಗೆ ಬ್ರಹ್ಮ ವಿಷ್ಣು ಮಹೇಶ್ವರನ ಸಂಕೇತವಾಗಿ ಮೂರು ಎಳೆಯ ಜನಿವಾರ 'ಕರೋಲಿ'ಯ ಮೂಲಕ ಹಾಕಿಸಲಾಗುತ್ತದೆ.

ಜನಿವಾರ ಹಾಕಿದ ಬಳಿಕ ಜನಿವಾರ ಹಾಕಿಕೊಂಡ ಹುಡುಗನಿಗೆ ತಂದೆ ತಾಯಿಗಳು ಆ ಹುಡಗನಿಗೆ ಹೊಸ ಬಟ್ಟೆಗಳನ್ನುಡಿಸಿ, ಹುಡುಗನ ಉಡಿಯಲ್ಲಿ ತಲಾ ಹತ್ತು ಹತ್ತು ಕೊಬ್ರಿಗಳನ್ನು ಹಾಕುತ್ತಾರೆ. ಮತ್ತು ಇಪ್ಪತ್ತೈದು ರೂಪಾಯಿಗಳನ್ನು ಜನಿವಾರ ಹಾಕಿಕೊಳ್ಳುವ ಹುಡುಗನ ಪಕ್ಕದಲ್ಲಿ ಕುಳಿತುಕೊಂಡ ಕರೋಲಿಗೆ "ಕಟ್‌ನೆಮ್" ಎಂಬ ಚಾಜವನ್ನು ಕೊಡಲಾಗುತ್ತದೆ ಎಂದು ಹೇಳುತ್ತಾರೆ.

ಕೊನೆಗೆ ಜನಿವಾರ ಹಾಕಿಸಿಕೊಂಡ ಹುಡನ ಉಡಿಯಲ್ಲಿನ ಒಟ್ಟು ಇಪ್ಪತ್ತು ಕೊಬ್ರಿಗಳನ್ನು ಚಿಕ್ಕ ಚಿಕ್ಕ ಚೂರುಗಳನ್ನಾಗಿ ಮಾಡಿ ಮತ್ತು ಕರೋಲಿಗೆ ಕೊಟ್ಟಿರುವ 'ಕಟನೆಮ್' ಚಾಜದ ಇಪ್ಪತ್ತೈದು ರೂಪಾಯಿಗಳನ್ನು ಒಟ್ಟು ಗೂಡಿಸಿ ಬಂತ್ರೂಗನಾದ ವ್ಯಕ್ತಿ ಸಮುದಾಯದ ಪದ್ಧತಿಯಂತೆ ಬಂದಂತಹ ಎಲ್ಲರಿಗೂ ಸಮಪಾಲು ಹಂಚುತ್ತಾನೆ ಎಂದು ಹೇಳುತ್ತಾರೆ. ಇದ್ದಾದ ಮೇಲೆ ಅವರ ಸ್ಥಿತಿಗತಿಗಳಿಗನುಗುಣವಾಗಿ ಸಿಹಿ ಊಟ ಮಾಡಿಸಲಾಗುತ್ತದೆ.

ಈ ಜನಿವಾರ ಹಾಕಿಕೊಳ್ಳುವ ಪದ್ಧತಿಯು ಬ್ರಾಹ್ಮಣೀಕರಣ ಮತ್ತು ಸಂಸ್ಕೃತಿಕರಣದ ಪ್ರಭಾವದಿಂದ ಈ ಸಮುದಾಯದಲ್ಲಿ ನಂತರದ ಕಾಲ ಘಟ್ಟದಲ್ಲಿ ಆಚರಣೆಗೆ ಬಂದಿರಬಹುದು ಎಂಬುದು ಸಂಶೋಧನೆಯ ಊಹೆಯಾಗಿದೆ. ಬುಡಕಟ್ಟು ಸಮುದಾಯದ ಲಕ್ಷಣಗಳುನ್ನು ಹೊಂದಿರುವ ಈ ಸಮುದಾಯ ತನ್ನದೆಯಾದಂತಹ ಆಚರಣೆಗಳ ಜೊತೆಯಲ್ಲಿ ಆಧುನೀಕರಣ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುತ್ತದೆ.

**ಈ. ಬಡಮನಿಂ (ಋತುಮತಿ) ಸಂಸ್ಕಾರ**

ಹುಡುಗಿ ಮೊದಲ ಸಲ ಮುಟ್ಟಾಗುವುದಕ್ಕೆ ಮೈನೆರೆದಳು, ದೊಡ್ಡವಳಾದಳು, ಋತುಮತಿಯಾದಳೆಂದು ಹೇಳುತ್ತಾರೆ. ಆದರೆ ಬೈಲು ಪತ್ತಾರರು ಋತುಮತಿಯಾದ ಹುಡುಗಿಗೆ 'ಬಡಮನಿಂ' ಎಂದು ಕರೆಯುತ್ತಾರೆ. ಅಲ್ಲದೆ 'ಬಡಮನಿಂ' ಎಂಬ ಋತುಶಾಂತಿ ಕಾರ್ಯಕ್ರಮವನ್ನು ಕೂಡ ಮಾಡುತ್ತಾರೆ. ಹುಡುಗಿ ಋತುಮತಿಯಾದ ತಕ್ಷಣ ಕುಟುಂಬದವರು ಸಮುದಾಯದ ಒಬ್ಬ ಬೇರೆ ಬೆಡಗಿನವರಿಗೆ ಹತ್ತು ರೂಪಾಯಿ ಚಾಜ ಕೊಟ್ಟು ವಿಷಯ ತಿಳಿಸುವ ಪದ್ಧತಿ ರೂಢಿಯಲ್ಲಿದೆ ಮತ್ತು ಈ ಸಂದರ್ಭದಲ್ಲಿ ಋತುಮತಿಯಾದ ಹುಡುಗಿ ಹಳೆಯ ಬಟ್ಟೆಗಳನ್ನುಟ್ಟುಕೊಂಡು ತಮ್ಮ ಗುಡಾರ ಅಥವಾ ಗುಡಿಸಲುಗಳಲ್ಲಿಯೇ

ಇರುತ್ತಾಳೆ. ಆಕೆಗೆ ದೆವ್ವ-ಭೂತಗಳು ಬಡಿಯುತ್ತವೆ ಎಂಬ ಭಯ ಇವರಲ್ಲಿರುತ್ತದೆ. ಆಕೆ ಬೈಹಿರ್ದೆಶೆಗೆ ಹೊರಗಡೆ ಹೋಗುವಾಗ ನಿಂಬೆಕಾಯಿಯನ್ನು ಆಕೆಯ ಕೈಯಲ್ಲಿ ಕೊಟ್ಟಿರುತ್ತಾರೆ. ಅಲ್ಲದೆ ಜೊತೆಯಲ್ಲಿ ಹಿರಿಯರಾದ ಹೆಣ್ಣುಮಕ್ಕಳು ಹೋಗುತ್ತಾರೆ. ಐದು ದಿನಗಳವರೆಗೆ ಕಟ್ಟುನಿಟ್ಟಾಗಿ ಮೈಲಿಗೆ ಆಚರಣೆ ಮಾಡಲಾಗುತ್ತದೆ. ಈ ಐದು ದಿನಗಳ ವರೆಗೆ ಸೋದರತ್ತೆಯಾದವಳು ಋತುಮತಿಯಾದ ಹುಡುಗಿಗೆ ನೀರು ಹಾಕುವ ಪದ್ಧತಿ ರೂಢಿಯಲ್ಲಿದೆ. ಒಂದು ವೇಳೆ ಸೋದರತ್ತೆ ಬರುವುದಕ್ಕೆ ತೊಂದರೆಗಳಾದರೆ ತಮ್ಮ ಕುಟುಂಬದಲ್ಲಿನ ಹಿರಿಯ ಮುತ್ತೈದೆಯರು ಕೂಡ ನೀರು ಹಾಕುತ್ತಾರೆ. ಈ ಐದು ದಿನಗಳ ಮೈಲಿಗೆ ಕಳೆದ ಮೇಲೆ ತಮ್ಮ ಕುಟಂಬದ ಸ್ಥಿತಿಗತಿಗಳಿಗನುಗುಣವಾಗಿ ಐದು, ಒಂಬತ್ತು, ಹನ್ನೊಂದು ದಿನಗಳ ವರೆಗೆ ಕೂಡಿಸುತ್ತಾರೆ. ಕೊನೆಯ ದಿನ ಗಂಗೆ ಸ್ಥಳಕ್ಕೆ ಹೋಗಿ ಬಾವಿ ಅಥವಾ ಹಳಕ್ಕೆ ಪೂಜೆಸಲ್ಲಿಸಿ, ಹನುಮಂತನ ದೇವರಿಗೆ ಹೋಗಿ ನಮಸ್ಕರ ಸಲ್ಲಿಸಿ ಬಂದಂತಹ ಬಂಧು ಬಳಗದವರಿಗೆಲ್ಲಾ ಸಿಹಿ ಊಟ ಮಾಡಿಸಿ ಕಳಿಸುವ ಸಂಪ್ರದಾಯಗಳನ್ನು ಅನುಸರಿಸುತ್ತಾರೆ.

**ಉ. ಗಟ್ಟಿ (ನಿಶ್ಚಿತಾರ್ಥ) ಕಾರ್ಯಕ್ರಮ**

ಬೈಲುಪತ್ತಾರ ಸಮುದಾಯದಲ್ಲಿ ಮೊದಲು ಕನ್ಯೆಯನ್ನು ನೋಡಲು ಹುಡುಗನ ಜೋತೆಗೆ ಕುಟುಂಬದವರು ಮತ್ತು ಸಮುದಾಯದಲ್ಲಿನ ಯಾವುದಾದರು ಕನಿಷ್ಠ ಮೂರು ಬೇರೆಬೇರೆ ಬೆಡಗಿನ ವ್ಯಕ್ತಿಗಳಿಗೆ ಕರೆದುಕೊಂಡು ಹೋಗುವ ಸಂಪ್ರದಾಯ ರೂಢಿಯಲ್ಲಿದೆ. ಹುಡುಗ ಕನ್ಯೆಯನ್ನು ನೋಡಿದ ಮೇಲೆ ಪರಸ್ಪರ ಇಬ್ಬರಿಗೂ ಮತ್ತು ಎರಡು ಕುಟುಂಬಗಳ ಹಿರಿಯರಿಗೆ ಸಂಬಂಧ ಬೆಳೆಸಲು ಒಪ್ಪಿಗೆಯಾದರೆ ಹಿರಿಯರು ಮಾತುಕತೆ ಪ್ರಾರಂಭಿಸುತ್ತಾರೆ.

ಬೈಲುಪತ್ತಾರ ಸಮುದಾಯದಲ್ಲಿ 'ಓಲಿ' (ವಧುದಕ್ಷಿಣೆ) 'ತೆರವು' ಕೊಡುವ ಪದ್ಧತಿ ಇಂದಿಗೂ ರೂಢಿಯಲ್ಲಿರುವುದರಿಂದ ಹೆಣ್ಣಿನ ಕುಟುಂಬದವರು 'ಓಲಿ' ಅಥವಾ 'ತೆರವು' ಕೇಳುತ್ತಾರೆ. ಈ ಓಲ ಅಥವಾ ತೆರವು ಪ್ರಸ್ತುತ ಸಂದರ್ಭದಲ್ಲಿ ಕನಿಷ್ಠ ಒಂದು ಸಾವಿರ ರೂಪಾಯಿಗಳಿಂದ ಗರಿಷ್ಠ ಎರಡು ಸಾವಿರ ರೂಪಾಯಿಗಳವರೆಗೆ ನಿಗದಿ ಮಾಡಲಾಗುತ್ತದೆ ಎಂದು ವಕ್ತೃಗಳಾದ ಲಚಮಣ್ಣ ಹತ್ತಿಕುಣಿ, ಸುಕುಮುನಿ ಶಾಹಾಪುರ್ ಇವರು ಹೇಳುತ್ತಾರೆ.

ಕೊನೆಗೆ ಸಮುದಾಯದ ಹಿರಿಯರು ಅವರ ಸ್ಥಿತಿಗತಿಗಳಿಗನುಗುಣವಾಗಿ ಓಲ ಅಥವಾ ತೆರುವು ನಿರ್ಧಾರ ಮಾಡಿ ಸಂಬಂಧ ಬೆಳೆಸಲು ಅನುವು ಮಾಡಿಕೊಡುತ್ತಾರೆ. ಸಂಬಂಧದ ಮಾತುಕಥೆ ಮುಗಿದ ಮೇಲೆ ಎರಡು ಕುಟುಂಬಗಳ ಮುಖ್ಯಸ್ಥರಿಂದ ಒಂದೊಂದು ರೂಪಾಯಿಯ ನಾಣ್ಯಗಳನ್ನು ತೆಗೆದುಕೊಂಡು ಗಟ್ಟಿ ಸಂಕೇತವಾಗಿ ಎಲ್ಲರಿಗೂ ಬಂತ್ತೂಗನಾದ ವ್ಯಕ್ತಿ ತೋರಿಸುತ್ತಾನೆ. ಕನ್ಯೆಯ ಕುಟುಂಬದವರು ಸಿಹಿ ಊಟ ಮಾಡಿಸುತ್ತಾರೆ. ಗಂಡಿನ ಕುಟುಂಬದವರು ಮಧ್ಯಪಾನವನ್ನು ಕುಡಿಸುತ್ತಾರೆ ಎಂದು ಹೇಳುತ್ತಾರೆ.

ಊ. ಸಂಗಾ (ವಿವಾಹ) ಸಂಸ್ಕಾರ

ಇವರು ವಿವಾಹಕ್ಕೆ 'ಸಂಗಾ' ಎಂದು ಕರೆಯುತ್ತಾರೆ. ಭಾರತೀಯ ಹಿಂದೂ ಸಮಾಜದಲ್ಲಿ ವಿವಾಹವು ಒಂದು ಪವಿತ್ರವಾದ ಬಂಧನವಾಗಿದೆ. ವಿವಾಹವು ಸಮಾಜದಲ್ಲಿ ಮತ್ತು ಸಮುದಾಯಗಳಲ್ಲಿ ಅನೈತಿಕತೆಗಳನ್ನು ತಡೆಗಟ್ಟುವಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಅಲ್ಲದೆ ಮುಂದಿನ ಕುಟುಂಬದ ಪೀಳಿಗೆಯನ್ನು ಮುಂದುವರೆಸಿಕೊಂಡು ಹೋಗುವ ಸಾಧನವಾಗಿ ಕಾರ್ಯನಿರ್ವಹಿಸುತ್ತದೆ. ವಿವಾಹವು ನಾಗರಿಕತೆಯ ವಿಕಾಸದ ವಿವಿಧ ಹಂತಗಳಲ್ಲಿ ಮತ್ತು ವಿವಿಧ ಜನಾಂಗೀಯ ಜನ ಸಮುದಾಯಗಳಲ್ಲಿ ವಿವಾಹದ ವಿಧಿ ವಿಧಾನಗಳಲ್ಲಿ ಅನೇಕ ಬಗೆಯ ಭಿನ್ನತೆಗಳಿರುವುದು ಕಂಡು ಬರುತ್ತದೆ. ಅಲ್ಲದೆ ಅನೇಕ ರೀತಿಯ ಮನೋರಂಜನೆಯ ಅಂಶಗಳು ಕೂಡ ಒಳಗೊಂಡಿರುತ್ತವೆ.

"ವಿವಾಹದ ಅರ್ಥವು ವಿವಾಹ ಎಂಬ ಪದವು ಸಂಸ್ಕೃತ ಭಾಷೆಯ ಶಬ್ದವಾಗಿದೆ. ಇದು ವಿ ಮತ್ತು ವಾಹ ಎಂಬ ಎರಡು ಶಬ್ದಗಳ ಸಂಯೋಗವಾಗಿರುತ್ತದೆ ವಿ ಹೋಗು ವಾಹ ಹೊತ್ತಕೊಂಡು ಹೋಗು ಎಂದು ಅರ್ಥವಾಗುತ್ತದೆ". ಅಂದರೆ ಹೆಣ್ಣಿನ ಮನೆಯಿಂದ ಗಂಡನಾದವನ್ನು ವಿವಾಹವಾದ ಮೇಲೆ ತನ್ನ ಮನೆಗೆ ಕರೆದುಕೊಂಡು ಹೋಗುವುದರ ಹಿನ್ನೆಲೆಯನ್ನು ಸೂಚಿಸಬಹುದು.

**ವಿವಾಹದ ಸಂದರ್ಭ ವಿವಿಧ ಪದ್ಧತಿಗಳು :**

ಬೈಲುಪತ್ತಾರ ಸಮುದಾಯದವರು ಪರಸ್ಪರ ವಿರುದ್ಧ ಬೆಡಗುಗಳಲ್ಲಿ ಸಂಬಂಧ ಬೆಳೆಸಿ ಮಾತುಕತೆಯ ಪ್ರಕಾರ ವಿವಾಹವು ಹೆಣ್ಣಿನ ಮನೆಯಲ್ಲಿಯಾದರು ಮಾಡಬಹುದು. ಇಲ್ಲವೆ ಗಂಡಿನ ಮನೆಯಲ್ಲಾದರೂ ಮಾಡಬಹುದು.

**ಹಂದರ ಬ್ಯಾಟಿ :** ಬೈಲುಪತ್ತಾರರ ಸಮುದಾಯದಲ್ಲಿ ವಿವಾಹದ ಹಂದರ ಹಾಕಿದ ತಕ್ಷಣ ಹಂದರಕ್ಕೆ ಪೂಜೆಸಲ್ಲಿಸಿ 'ಹಂದರ ಬ್ಯಾಟಿ' ಮಾಡುವ ಸಂಪ್ರದಾಯ ಅನುಸರಿಸುತ್ತಾರೆ. ಒಳ್ಳೆಯ ಕೊಬ್ಬಿದ ಆಡನ್ನು ತಂದು ಹಂದರದಲ್ಲಿ ಅದರ ಕುತ್ತಿಗೆಯನ್ನು ಕತ್ತರಿಸಲಾಗುತ್ತದೆ. ಕುತ್ತಿಗೆ ಕತ್ತರಿಸಿದ ಮೇಲೆ ಅದರ ರಕ್ತದ ತೀಲಕವನ್ನು ದೇವರಿಗೆ ಅರ್ಪಿಸಿ ಬ್ಯಾಟಿಯ ಮಾಂಸವನ್ನು ಸಮುದಾಯದ ಪದ್ಧತಿ ಪ್ರಕಾರ ಪಾಲುಹಾಕಿ ಹಂಚಿಕೊಳ್ಳುತ್ತಾರೆ. ತಮ್ಮ ಪಾಲಿಗೆ ಬಂದಂತಹ ಮಾಂಸವನ್ನು ತಮ್ಮ ಮನೆಗಳಿಗೆ ತೆಗೆದುಕೊಡು ಹೋಗುತ್ತಾರೆ. ಈ ಸಂದರ್ಭದಲ್ಲಿ ಮದುವೆ ಹುಡುಗ ತನ್ನ ಕನ್ನೆಯ ಮುಖಕ್ಕೆ ಹೆಂಡ ಚಿಮುತ್ತಾನೆ. ನಂತರ ಸಮುದಾಯದವರು ಮದ್ಯವನ್ನು ಸೇವಿಸಿ ಸಂತೋಷದಲ್ಲಿ ತೇಲಾಡುತ್ತಾರೆ. ಸಮುದಾಯದಲ್ಲಿ ಹಂದರ ಹಾಕುವ ದಿನ ಬ್ಯಾಟಿ ಮಾಡಲು ಅನಾನುಕೂಲಗಳಾದರೆ ಹಂದರ ಇಳಿಸುವ ದಿನ ಕೂಡಾ ಈ ಬ್ಯಾಟಿ ಮಾಡುವ ಪದ್ಧತಿ ಅನುಸರಿಸುತ್ತಾರೆ.

**ತೆಂಗಿನಕಾಯಿ ನೀರು ಚಿಮ್ಮುವುದು :** ಹಂದರ ಬ್ಯಾಟಿ ಕಾರ್ಯಕ್ರಮ ಮುಗಿದ ಮೇಲೆ ತೆಂಗಿನಕಾಯಿ ನೀರು ಚಿಮ್ಮುವ ಕಾರ್ಯಕ್ರಮ ನಡೆಯುತ್ತದೆ. ಸಮುದಾಯದಲ್ಲಿನ ಯಾರಾದರೊಬ್ಬರೂ ಎಳೆಯ

ತೆಂಗಿನ ಕಾಯಿಯ ನೀರನು ಗ್ಲಾಸಿನಲ್ಲಿ ಸಂಗ್ರಹಿಸಿ ವರನಿಗೆ ತಂದು ಕೊಡುತ್ತಾರೆ. ಈ ಸಂದರ್ಭದಲ್ಲಿ ವರನ ಪಕ್ಕದಲ್ಲಿ ಚಾಜ ಮಾಡಲಿಕ್ಕೆ 'ಕರೋಲಿ' ಎಂಬ ಒಬ್ಬ ವ್ಯಕ್ತಿ ಕುಳಿತುಕೊಂಡಿರುತ್ತಾನೆ. ಇವನು ಮದುವೆ ಗಂಡಿಗೆ ಸಹಾಯಕನಾಗಿರುತ್ತಾನೆ. ಅಲ್ಲದೆ ವರನ ಹೆಬ್ಬೆರಳನ್ನು ಹಿಡಿದಿರುತ್ತಾನೆ. ನಂತರ ಗ್ಲಾಸಿನಲ್ಲಿ ವರನಿಗೆ ತಂದು ಕೊಟ ಎಳೆಯ ತೆಂಗಿನ ಕಾಯಿಯ ನೀರನ್ನು ಮದುವೆಯಾಗುವ ಗಂಡು ತನ್ನ ಕನ್ಯೆಯ ಮುಖಕೆ ಚಿಮ್ಮುವ ಸಂದರ್ಭದಲ್ಲಿ ವರನ ಸೋದರತ್ತೆಯಂದಿರು ಸೊಸೆಯಂದಿರು ನೀರು ಚಿಮ್ಮಲು ಅನುವು ಮಾಡಿಕೊಡದೆ ಬೆನ್ನಿಗೆ ಬಡಿಯುತ್ತಿರುತ್ತಾರೆ. ಕರೋಲಿಯಾದವನ್ನು ವರನ ಹೆಬ್ಬೆರಳನ್ನು ಬಿಡದೆ ಹಿಡಿದಿರುತ್ತಾನೆ. ಈ ಸಂದರ್ಭದಲ್ಲಿ ಸಮುದಾಯದ ಎಲ್ಲರೂ ಸಂತೋಷ ನಗೆಗಳಲ್ಲಿ ಪಾಲ್ಗೊಂಡಿರುತ್ತಾರೆ ಎಂದು ಸಮುದಾಯದ ವಕ್ತೃಗಳು ಹೇಳುತ್ತಾರೆ.

**ಹಸಿರು ಬಳೆ ಹಾಕಿಸುವ ಕಾರ್ಯಕ್ರಮ :** ತೆಂಗಿನ ನೀರು ಚಿಮ್ಮುವ ಕಾರ್ಯಕ್ರಮ ಮುಗಿದ ಮೇಲೆ ಮದುಮಗಳಿಗೆ "ಹಸಿರು ಬಳೆ" ಹಾಕಿಸುವ ಕಾರ್ಯಕ್ರಮ ನಡೆಯುತ್ತದೆ. ಈ ಹಸಿರುಬಳೆ ಹಾಕಿಸುವ ಸಂದರ್ಭದಲ್ಲಿ ಮದುವೆಯಾಗುವ ಗಂಡು ತನ್ನ ಕನ್ಯೆಯ ಕೈಹಿಡಿದು ತಂದು ಹಸಿರುಬಳೆ ಹಾಕಿಸಿಕೊಳ್ಳಲು ಬಳೆಗಾರನ ಕೈಗೆ ಕೊಡುತ್ತಾನೆ. ಈ ಸಂದರ್ಭದಲ್ಲಿ ಎಲ್ಲರೂ ಇವರಿಗೆ ರೇಗಿಸುತ್ತಾ ಸಂತೋಷ ವ್ಯಕ್ತಪಡಿಸುತ್ತಾರೆ. ಮದುಮಗಳೊಂದಿಗೆ ಅಲ್ಲಿರುವ ಮುತ್ತೈದೆಯರು ಕೂಡಾ ಹಸಿರು ಬಳೆ ಹಾಕಿಸಿ ಕೊಳ್ಳುತ್ತಾರೆ. ಈ ಬಳೆ ಹಾಕಿಕೊಳ್ಳುವ ಖರ್ಚು ವರನ ಕುಟುಂಬದವರೆ ಕೊಡುವ ಸಂಪ್ರದಾಯ ರೂಢಿಯಲ್ಲಿದೆ.

**ಸಣ್ಣ ಅರಿಷಿಣ ಕಾರ್ಯಕ್ರಮ :** ಹಸಿರು ಬಳೆ ಹಾಕಿಸಿಕೊಳ್ಳುವ ಕಾರ್ಯಕ್ರಮ ಮುಗಿದ ಮೇಲೆ ಸಣ್ಣ ಅರಿಷಿಣ ಹಚ್ಚುವ ಕಾರ್ಯಕ್ರಮ ನಡೆಯುತ್ತದೆ. ಹಂದರದಲ್ಲಿಯೇ ಪ್ರತ್ಯೆಖವಾಗಿ ಗಂಡಿನ ಬಳಗದವರು ಗಂಡಿಗೆ, ಹೆಣ್ಣಿನ ಬಳಗದವರು ಹೆಣ್ಣಿಗೆ ಅರಿಷಿಣ ಹಚ್ಚಿ ನೀರು ಹಾಕುವ ಸಣ್ಣ ಅರಿಷಿಣ ಕಾರ್ಯಕ್ರಮ ಮಾಡುತ್ತಾರೆ. ನಂತರ ವದು-ವರರಿಬ್ಬರಿಗೂ ಹೊಸ ಬಟ್ಟೆಗಳನ್ನು ಕೊಟ್ಟು ಪ್ರತ್ಯೇಕವಾಗಿ ಉಪಚರಿಸಲಾಗುತ್ತದೆ.

**ದೊಡ್ಡ ಅರಿಸಿಣ ಕಾರ್ಯಕ್ರಮ :** ಎರಡನೆ ಸಲ ವಿವಾಹಕ್ಕೆ ಬಂದಂತಹ ಸಮುದಾಯದ ಎಲ್ಲರ ಎದುರಿನಲ್ಲಿ ವಧು-ವರರಿಗೆ ಪಕ್ಕದಲ್ಲಿ ಕೂಡಿಸಿ ದೊಡ್ಡ ಅರಿಸಿಣ ಹಚ್ಚುವ ಕಾರ್ಯಕ್ರಮ ಅನುಸರಿಸುತ್ತಾರೆ. ಹಂದರದಲ್ಲಿ ಇಬ್ಬರಿಗೂ ಅರಿಸಿಣ ಹಚ್ಚಿದ ಮೇಲೆ ನೀರು ಹಾಕುತ್ತಾರೆ. ಈ ಸಂದರ್ಭದಲ್ಲಿ ವಧು-ವರಗಳ ಪಕ್ಕದಲ್ಲಿ ಚಾಜ ಮಾಡಲಿಕ್ಕೆ ಯಾವುದಾದರೊಂದು ಬೇರೆ ಬೆಡಗಿನ ದಂಪತಿಗಳು ಕುಳಿತುಕೊಂಡಿರುತ್ತಾರೆ. ಈ ದಂಪತಿಗಳಿಗೆ 'ಕರೋಲಿ' ಎಂದು ಕರೆಯುತ್ತಾರೆ. ಅರಿಷಿಣ ಹಚ್ಚಿ ನೀರು ಹಾಕಿದ ಮೇಲೆ ಮದುಮಕ್ಕಳಿಗೆ ಹೊಸ ಬಟ್ಟೆಗಳನ್ನು ಉಡಿಸುತ್ತಾರೆ. ಹಸಿಗೆ ಕರೆದುಕೊಂಡು ಬರುತ್ತಾರೆ.

**ತಾಳಿ ಕಾರ್ಯಕ್ರಮ :** ಹಿರಿಯರು ಬರೆದಂತಹ ಅಕ್ಕಿಕಾಳಿನ ಹಸಿಗೆ ಕಟ್ಟೆಗೆ ಮದುಮಕ್ಕಳಿಗೆ

ಕರೆತರಲಾಗುತ್ತದೆ. ಹಸಿಗೆ ಕಟ್ಟೆಯ ಮೇಲೆ ಮದುಮಕ್ಕಳಿಗೆ ಕೂಡಿಸದ ಮೇಲೆ ಅವರ ಪಕ್ಕದಲ್ಲಿ ಬಾಜ ಮಾಡುವ ಕರೋಲಿ ದಂಪತಿಗಳು ಕುಳಿತುಕೊಳ್ಳುತ್ತಾರೆ. ವಿವಾಹವಾಗುವ ವಧು-ವರಗಳ ಎದುರಿನಲ್ಲಿ "ರಾಮ ರಾಮಕೀ" ಎಂಬ ಯಾವುದಾದರೊಂದು ಮತ್ತೊಂದು ಬೆಡಗಿನ ವ್ಯಕ್ತಿ ಕುಳಿತುಕೊಂಡಿರುತ್ತಾನೆ. ಈ "ರಾಮ ರಾಮಕೀ" ಎಂಬ ವ್ಯಕ್ತಿ ವರನ ಕುಟುಂಬದವರ ಹತ್ತಿರ ಒಂದು ರೂಪಾಯಿ ನಾಣ್ಯವನ್ನು ತೆಗೆದುಕೊಂಡು ವಿವಾಹ ಸಮಾರಂಭಕ್ಕೆ ಬಂದಿರುವ ಎಲ್ಲಾ ಜನರಿಗೆ ತೋರಿಸಿ, ಸಮುದಾಯದ ಮುಖಂಡನಾದ ಬಂತ್ಯಾಗನ ಕೈಯಲ್ಲಿ ಕೊಡುತ್ತಾನೆ. ಈ ಒಂದು ರೂಪಾಯಿ ಬಂತ್ಯಾಗನಿಗೆ ಕೊಟ್ಟ ಮೇಲೆ ತಟ್ಟೆಯಲ್ಲಿ ಹೆಣ್ಣಿಗೆ ತಾಳಿ ಕರಿಮಣಿ ಕಾಲೂಂಗುರ ಕುಂಕುಮ ತಂದು "ಓಂ ಬ್ರಹ್ಮ ವಿಷ್ಣು ಮಹೇಶ್ವರ ಸ್ತಂಭಿನಿಕರ ಪುತಃ ಬೇದ ನಿಷ್ಪಃಹ್" ಎಂಬ ಮಂತ್ರವನ್ನು ಕಲಿತುಕೊಂಡವರು ಹೇಳಿದ ಮೇಲೆ ಹೆಣ್ಣಿಗೆ ತಾಳಿ ಕಟ್ಟಲಾಗುತ್ತದೆ. ಕೊನೆಯಲ್ಲಿ ನವದಂಪತ್ತಿಗಳಿಗೆ ಇಪ್ಪತ್ತು ಇಪ್ಪತ್ತು ಕೊಬ್ರಿಗಳನ್ನು ಉಡಿತುಂಬಿ ಹನುಮಾನ ದೇವರಿಗೆ ಮೆರವಣಿಗೆ ಹೋಗಿ ಬಂದ ಮೇಲೆ ಬಂದಂತಹ ಸಮುದಾಯದ ಎಲ್ಲಾ ಜನರಿಗೆ ಸಿಹಿ ಊಟ ಹಾಕಿಸಲಾಗುತ್ತದೆ. ಈ ಸಿಹಿ ಊಟದ ಖರ್ಚು ಗಂಡಿನ ಕುಟುಂಬದವರೇ ಮಾಡುತ್ತಾರೆ. ಆದರೆ ಹೆಣ್ಣಿನ ಕುಟುಂಬದವರು ಕಾಲು ಭಾಗ ಮಾತ್ರ ಕೊಡುವ ಸಂಪ್ರದಾಯ ರೂಢಿಯಲ್ಲಿದೆ.

ಕೊನೆಯಲ್ಲಿ ಮದುಮಕ್ಕಳ ಉಡಿಯಲ್ಲಿ ಹಾಕಿದ ಕೊಬ್ರಿಗಳನ್ನು ಚಿಕ್ಕ ಚಿಕ್ಕ ಚೂರುಗಳನ್ನಾಗಿ ಮಾಡಿ ಸಮುದಾಯದ ಪದ್ಧತಿ ಪ್ರಕಾರ ಎಲ್ಲರೂ ಹಂಚಿ ಕೊಳ್ಳುತ್ತಾರೆ.

**ಖ. ಸಡಾಬಾಟ್ (ವಿಚ್ಛೆದನೆ) ಪದ್ಧತಿ**

ಜನಪದರು ಹೇಳುವ ಪ್ರಕಾರ ಸಂಸಾರವೆಂಬುದು ಸಾಗರವಿದ್ದಂತೆ ಕುಟುಂಬವೆಂಬುದು ಬಂಡಿ ಇದ್ದಂತೆ, ಗಂಡ ಹೆಂಡತಿ ಆ ಬಂಡಿಯ ಚಕ್ರಗಳಿದಂತೆ ಇವರಿಬ್ಬರ ಮಧ್ಯ ಮಾನಸಿಕ ಶಾಂತಿ ಸಹಕಾರ ಮನೋಭಾವನೆಗಳಿಲ್ಲದೆ ಹೋದಾಗ ವಿವಾಹ ವಿಚ್ಛೇಧನೆಯಂತಹ ವಿಧಿ ವಿಧಾನಗಳಿಗೆ ಅನಿವಾರ್ಯವಾಗಿ ಹೊಗಲೇಬೇಕಾಗುತ್ತದೆ.

ಬೈಲುಪತ್ತಾರ ಸಮುದಾಯದಲ್ಲಿಯೂ ಕೂಡಾ ದಂಪತಿಗಳಿಬ್ಬರಲ್ಲಿ ವಿರಸ ಉಂಟಾಗಿ ಸಂಸಾರದಲ್ಲಿ ಹೊಂದಾಣಿಕೆ ಇಲ್ಲದಿದ್ದರೆ, ಗಂಡನಾಗಲಿ ಇಲ್ಲವೇ ಹೆಂಡತಿಯಾಗಲಿ ವಿವಾಹ ವಿಚ್ಛೆಧನೆ ಪಡೆದುಕೊಳ್ಳಲು ಅವಕಾಶವನ್ನು ಕಲ್ಪಿಸಿದ್ದಾರೆ. ಇವರು ಈ ವಿವಾಹ ವಿಚ್ಛೆದನೆಗೆ 'ಸಡಾಬಾಟ್' ಎಂದು ಕರೆಯುತ್ತಾರೆ.

ಈ ವಿವಾಹ ವಿಚ್ಛೇಧನೆ ಪಡೆದು ಕೊಳ್ಳುವವರು ಮೊದಲು ತಮ್ಮ ಸಮುದಾಯದಲ್ಲಿನ ಯಾವುದಾದರೂ ಮೂರು ಬೆಡಗಿನ ಮುಖ್ಯಸ್ಥರಿಗೆ ಮತ್ತು ಸಮುದಾಯದ ಹಿರಿಯನಾದ 'ಬಂತ್ಯಾಗ'ನಿಗೆ ಅಂದರೆ, ತೀರ್ಮಾನ ಮಾಡುವ 'ಮುಖ್ಯಮುಖ್ಯಸ್ಥ'ನಿಗೆ ಕರೆಸಿ ಕುಲ ಪಂಚಾಯತಿಯ ಮೂಲಕ ವಿವಾಹ ವಿಚ್ಛೇಧನೆ ಕೊಡಲಾಗುತ್ತದೆ. ಈ ವಿವಾಹ ವಿಚ್ಛೇದನೆಯ ಸಂದರ್ಭದಲ್ಲಿ ಹೆಣ್ಣಿಗೆ ಕಟ್ಟಿದ ತಾಳಿ

ಕಾಲೂಂಗುರಗಳನ್ನು ವಾಪಾಸ ಪಡೆಯುವ ಪದ್ಧತಿ ರೂಢಿಯಲ್ಲಿದೆ. ತಾಳಿ ಕಾಲುಂಗರಗಳನ್ನು ವಾಪಾಸ್ ಪಡೆದ ಮೇಲೆ ಆಕೆಯ ಗಂಡ ಅವಳ ಸೇರಗಿನಲ್ಲಿ ಒಂದು ರೂಪಾಯಿ ನಾಣ್ಯ ಕಟ್ಟಿ ಬಿಟ್ಟುಬಿಡುತ್ತಾನೆ ಎಂದು ವಕ್ತೃಗಳು ಹೇಳುತ್ತಾರೆ.

**೫೦. ದರಾ (ಹುಡುಕಿ) ಮದುವೆ**

ಬುಡಕಟ್ಟು ಸಮುದಾಯಗಳು ತಮ್ಮ ಜನಾಂಗೀಯ ಜನ ಶುದ್ಧತೆಯನ್ನು ಕಾಪಾಡಿಕೊಂಡು ಬರುವ ಹಿನ್ನೆಲೆಯಾಗಿರಬಹುದು. ಇಲ್ಲವೇ ತಮ್ಮ ಸಮುದಾಯಗಳ ಸಾಮಾಜಿಕ ಸಮಸ್ಯೆಗಳು ಪರಿಹಾರಗಳ ಪ್ರಯತ್ನದ ಹಿನ್ನೆಲೆಯಾಗಿರಬಹುದು. ಅಥವಾ ಗಂಡು ಹೆಣ್ಣಿನ ಜೀವನದ ಬದುಕಿನ ಮುಂದುವರಿಕೆಯಂತಹ ಕಾರ್ಯಗಳ ಹಿನ್ನೆಲೆಯಲ್ಲಿಯಾಗಿರಬಹುದು. ಇಂತಹ ಕಾರಣಗಳ ಹಿನ್ನೆಲೆಯಲ್ಲಿ ಹುಡುಕಿ ಮದುವೆಗಳಿಗೆ ಅವಕಾಶ ಮಾಡಿಕೊಟ್ಟಿರುತ್ತವೆ.

ಇಲ್ಲಿ ಬೈಲುಪತ್ತಾರ ಸಮುದಾಯವು ಕೂಡಾ ಇಂತಹ ಮದುವೆಗಳಿಗೆ ಅವಕಾಶ ಕಲ್ಪಿಸಿರುವುದು ತಮ್ಮ ಸಮುದಾಯದ ನಿರಂತರ ಬೆಳವಣಿಗೆಯ ಮುಂದುವರಿಕೆ ಎಂದು ಹೇಳಬಹುದು.

ಬೈಲುಪತ್ತಾರ ಸಮುದಯಾದಲ್ಲಿ ದರಾ (ಹುಡುಕಿ) ಮದುವೆ ಮಾಡಿಕೊಳ್ಳುಲು ಅನುವು ಮಾಡಿಕೊಟ್ಟಿರುವ ಸಂದರ್ಭಗಳು ಈ ರೀತಿಯಾಗಿವೆ.

೧. ಗಂಡನಾದವನ್ನು ಮದುವೆಯಾಗಿ ಕಾರಣಾಂತರಗಳಿಂದ ಆಕೆಗೆ ತವರು ಮನೆಯಲ್ಲಿ ಬಿಟ್ಟಾಗ, ಗಂಡನಾಗಲಿ ಇಲ್ಲವೆ ಹೆಂಡತಿಯಾಗಲಿ ವಿವಾಹ ವಿಚ್ಛೇಧನೆ ಪಡೆದುಕೊಂಡು ದರಾ (ಹುಡುಕಿ) ಮದುವೆ ಮಾಡಿಕೊಳ್ಳಬಹುದು.

೨. ಗಂಡು ಅಥವಾ ಹೆಣ್ಣು ವಿಧುರನಾದಾಗ, ಇಲ್ಲವೇ ವಿಧವೆಯಾದಾಗ ಮರುಮದುವೆಗೆ ಇಚ್ಛೆ ಪಟ್ಟರೆ ದರಾ (ಹುಡರ) ಮದುವೆ ಮಾಡಿಕೊಳ್ಳಬಹುದು.

೩. ತಮ್ಮ ಸಮುದಾಯದಲ್ಲಿನ ವಿವಾಹಿತ ಸ್ತ್ರೀಯೊಂದಿಗೆ ಅನೈತಿಕ ಸಂಬಂಧ ಬೆಳೆದರೆ ಆ ಮಹಿಳೆ ವಿವಾಹ ವಿಚ್ಛೇಧನೆ ಪಡೆದುಕೊಂಡು ಆತನೊಂದಿಗೆ ದರಾ (ಹುಡುಕಿ) ಮದುವೆ ಮಾಡಿಕೊಳ್ಳಬಹುದು.

**ದರಾ (ಹುಡುಕಿ) ಮದುವೆಯ ವಿಧಿ-ವಿಧಾನಗಳು**

ದರಾ (ಹುಡುಕಿ) ಮದುವೆ ಮಾಡಿಕೊಳ್ಳವ ಗಂಡು ತಮ್ಮ ಸಮುದಾಯಕ್ಕೆ ಆಡಿನ ಬ್ಯಾಟಿಯನ್ನು ಕೂಡಲೇಬೇಕೆಂಬ ಸಂಪ್ರದಾಯವು ರೂಢಿಯಲ್ಲಿದೆ. ಈ ಆಡಿನ ಬ್ಯಾಟಿಯನ್ನು ಮದುವೆ ಮಾಡಿಕೊಳ್ಳುವ ವ್ಯಕ್ತಿಯ ಅಂಗಳದಲ್ಲಿ ನೇರವೆರಿಸಲಾಗುತ್ತದೆ. ನಂತರ ಈ ಆಡಿನ ಬ್ಯಾಟಿಯ ಮಾಂಸವನ್ನು ತಮ್ಮ ಸಮುದಾಯದ ಪದ್ಧತಿ ಪ್ರಕಾರ ಎಲ್ಲರು ಹಂಚಿಕೊಳ್ಳುತ್ತಾರೆ. ಇದಾದ ಮೇಲೆ ದರಾ (ಹುಡುಕಿ) ಮದುವೆ ಕಾರ್ಯಗಳನ್ನು ದರಾ (ಹುಡುಕಿ) ಮದುವೆಯಾದ ವ್ಯಕ್ತಿಯ ಮೂಲಕ ನೇರವೆರಿಸಲಾಗುತ್ತದೆ. ಒಂದು

ವೇಳೆ ದರಾ (ಹುಡುಕಿ) ಮದುವೆಯಾದವರು ಸಿಗದೇ ಹೋದಾಗ, ಪಂಚರ (ಸಮುದಾಯದ ವಿವಿಧ ಮುಖಂಡರ) ಸಮಕ್ಷಮದಲ್ಲಿ ಅವರನ್ನು ಮನೆ ಹೋಗಿಸಲಾಗುತ್ತದೆ. ಇದಕ್ಕೆ ಸಮುದಾಯದವರು "ಗೋರ್‌ಗೂಸಿ" ಎಂದು ಕರೆಯುತ್ತಾರೆ. ಇವರ ಸಮುದಾಯದಲ್ಲಿ ಮದುವೆಯಾಗದ ಹುಡುಗ ವಿಧವೆ ಚಿಕ್ಕವಳಾಗಿ ಸುಂದರಳಾಗಿದರೆ ಆಕೆಯನ್ನು ಮದುವೆ ಮಾಡಿಕೊಳ್ಳಲು ಬಯಸಿದರೆ ಆ ಹುಡುಗ ದರಾ (ಹುಡುಕಿ) ಮದುವೆ ಚಾಜಗಳನ್ನು ಪಡೆದುಕೊಳ್ಳುತ್ತಾನೆ.

**ಎ. ಪೊಟ್‌ಮುಟ್ಟಿ (ಶವ) ಸಂಸ್ಕಾರ**

ಹುಟ್ಟು-ವಿಕಾಸ-ಅಂತ್ಯ ಈ ಮೂರು ಕ್ರಮಗಳಲ್ಲಿ ಮಾನವನ ಬದುಕಿನ ಚಿತ್ರಣಗಳು ಪ್ರತಿಬಿಂಬಿಸುತ್ತವೆ. ಪ್ರಪಂಚದಲ್ಲಿ ಜೀವವಿರುವ ಯಾವುದೇ ಪ್ರಾಣಿಯಾಗಲಿ ಈ ಮೂರು ಚಕ್ರಗಳ ಸುಳಿಗಳಲ್ಲಿ ನಾಶ ಹೊಂದಲೇಬೇಕು. ಜನಪದರು ಮೂಳೆ ಮಾಂಸಾದಿಗಳಿಂದ ಕೂಡಿ ಈ ದೇಹ "ಹೋಗುವಾಗ ಬೆತ್ತಲೆ, ಬರುವಾಗ ಬೆತ್ತಲೆ, ಹೋಗಿ ಬರುವ ನಡುವೆ ಬರಿ ಕತ್ತಲೆ" ಎನ್ನುತ್ತಾರೆ. ಆದರೆ ಮಾನವನು ತನ್ನ ಹುಟ್ಟಿನ ಜೀವನದಿಂದ ಅಂತ್ಯದವರೆಗೆ ಸಮಾಜಕ್ಕೆ ಅನೇಕ ಹೊಸ ಜ್ಞಾನ ಪರಂಪರೆಯನ್ನು ಬಿಟ್ಟು ಹೋಗುತ್ತಾನೆ. ಜೊತೆಗೆ ಸಮಾಜದಲ್ಲಿನ ಅನೇಕ ವ್ಯವಸ್ಥೆಗಳಲ್ಲಿ ಕಷ್ಟಸುಖಗಳನ್ನು ಅನುಭವಿಸಿ, ಹುಟ್ಟಿನಿಂದ ಚಟ್ಟದವರೆಗೆ ಅನೇಕ ಸಂಸ್ಕಾರಗಳನ್ನು ಪಡೆದುಕೊಳ್ಳುತ್ತಾನೆ. ಅವುಗಳಲ್ಲಿ ಈ ಕೊನೆಯ ಮರಣ ಸಂಸ್ಕಾರವು ಕೂಡಾ ಒಂದಾಗಿದೆ.

ಅಲೆಮಾರಿ ಜೀವನ ನಡೆಸುವ ಬೈಲುಪತ್ತಾರರ ಸಮುದಾಯಲ್ಲಿಯೂ ಕೂಡಾ ಶವ ಸಂಸ್ಕಾರ ಸಂದರ್ಭದಲ್ಲಿ ತಮ್ಮದೆಯಾದಂತಹ ವಿಧಿ-ವಿಧಾನಗಳನ್ನು ಅನುಸರಿಸುತ್ತಾರೆ. ಇವರು ವಿವಾಹವಾದರೂ ತೀರಿಕೊಂಡರೆ 'ಪೊಟ್‌ಮುಟ್ಟಿ' ಎಂದು ಕರೆಯುತ್ತಾರೆ. ವಿವಾಹವಾಗದೇ ಇರುವವರೂ ತೀರಿಕೊಂಡರೆ 'ಮಾಟಮುಟ್ಟಿ' ಎಂದು ಕರೆಯುತ್ತಾರೆ. ಇವರ ಸಮುದಾಯದಲ್ಲಿ ಶವವನ್ನು ಊಳುವ ಪದ್ಧತಿ ರೂಢಿಯಲ್ಲಿದೆ. ತಮ್ಮ ಸಮುದಾಯದ ಕುಟುಂಬದಲ್ಲಿ ಯಾರಾದರೂ ತೀರಿಕೊಂಡರೆ ತಕ್ಷಣ ಸಮುದಾಯದ ಬೇರೆ ಬೆಡಗಿನವರಿಗೆ ಹತ್ತು ರೂಪಾಯಿ ಚಾಜಕೊಡುವ ಸಂಪ್ರದಾಯ ರೂಢಿಯಲ್ಲಿದೆ. ಈ ಚಾಜ ತೆಗೆದುಕೊಂಡ ವ್ಯಕ್ತಿಗೆ 'ಬಂತ್ಯಾಗ' ಎಂದು ಕರೆಯುತ್ತಾರೆ. ಈ ಬಂತ್ಯಾಗನಾದ ವ್ಯಕ್ತಿ ಸತ್ತ ಶವದ ಎರಡು ಕಾಲುಗಳ ಹೆಬ್ಬೆರಳುಗಳನ್ನು ಮತ್ತು ಎರಡು ಕೈಗಳ ಹೆಬ್ಬೆರಳನ್ನು ಜೋಡಿಸಿ ದಾರದಿಂದ ಕಟ್ಟುತ್ತಾರೆ. ಕೆಲವು ಸಮುದಾಯಗಳ ನಂತರ ಶವದ ಮೈಯನ್ನು ತೊಳೆದು ಮಲಗಿಸಲಾಗುತ್ತದೆ ಇವರ ಸಮುದಾಯದಲ್ಲಿ ಹೆಣವನ್ನು ಗೊಟ್ಟಕ್ಕೆ ಬಡಿಯುವ ಸಂಪ್ರದಾಯ ಇರುವದಿಲ್ಲ. ಕೊನೆಗೆ ಬಂಧು ಬಳದವರೆಲ್ಲರೂ ಅಂತ್ಯ ಸಂಸ್ಕಾರಕ್ಕೆ ಬಂದ ಮೇಲೆ ಶವವನ್ನು ಚಟ್ಟದ ಮೇಲೆ ಹಾಕಿ ನಾಲ್ಕು ಮೂಲೆಗಳಿಗೆ ಒಬ್ಬೊಬ್ಬರಂತೆ ಹೊತ್ತುಕಂಡು ಸ್ಮಶಾನ ಹೋಗುತ್ತಾರೆ. ಒಂದು ವೇಳೆ ಚಿಕ್ಕವರು ತೀರಿಕೊಂಡರೆ ತಟ್ಟಿನಲ್ಲಿ ತೆಗೆದುಕೊಂಡು ಹೋಗುತ್ತಾರೆ.

ಶವವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವಾಗ "ರಾಮ ನಾಮ ಸತ್ಯ ಹೈ" ಎಂದು ಶವವನ್ನು ಊಳುವ ಕುಣಿಯ ತನಕ ಬರುವವರಿಗೆ ಹೇಳುತ್ತಾರೆ.

ಶವವನ್ನು ಕುಣಿಯ ಹತ್ತಿರ ತಂದು ಕೊನೆಯ ಪೂಜೆ ಸಲ್ಲಿಸಿದ ಮೇಲೆ 'ಬಂತ್ರೂಗ'ನಾದ ವ್ಯಕ್ತಿ ಬಂದು ಶವದ ಕಾಲಿಗೆ ಮತ್ತು ಕೈಗಳಿಗೆ ಕಟ್ಟಿದ ಹೆಬ್ಬೆರಳಿನ ದಾರಗಳನ್ನು ಬಿಚ್ಚುತ್ತಾನೆ. ಆಗ ಶವವನ್ನು ಕುಣಿಯಲ್ಲಿ ದಕ್ಷಿಣೋತ್ತರವಾಗಿ ಮಲಗಿಸಿ, ದಕ್ಷಿಣಕ್ಕೆ ಕಾಲು, ಉತ್ತರಕ್ಕೆ ತಲೆಮಾಡಿ, ಪೂರ್ವದಿಕ್ಕಿಗೆ ಮುಖ ತಿರುಗಿಸಿ, ಮುಖದ ಮೇಲೆ ಎಲೆಗಳನ್ನಿಟ್ಟು ಮಣ್ಣು ಹಾಕಿ ಊಳುತ್ತಾರೆ. ಎಲ್ಲರೂ ಮನೆಗೆ ಬಂದ ಮೇಲೆ ಕುಟುಂಬದವರು ಮತ್ತು ಆ ಕುಟುಂಬದ ಬೆಡಗಿನವರು ಸೇರಿ ಬಂತ್ರೂಗನಿಗೆ ಮತ್ತೇ ಮೂರು ರೂಪಾಯಿಗಳನ್ನು ಕೊಡುತ್ತಾರೆ. ಆಗ ಬಂತ್ರೂಗನ್ನ ಮೊದಲಿನ ಹತ್ತು ರೂಪಾಯಿಗಳು ಮತ್ತು ಈಗಿನ ಮೂರು ರೂಪಾಯಿಗಳಿಂದ ಸಕ್ಕರೆ ತರಿಸಿ ತಿನ್ನಿಸಿ ವಿಷಬಾಯಿ ತೊಳೆಸುತ್ತಾನೆ.

**ದೀನ್‌ಕರಾಜ (ದಿನದ ಕಾರ್ಯ) :** ವ್ಯಕ್ತಿ ತೀರಿಕೊಂಡ ಮೇಲೆ ಮೂರನೆ ದಿನಕ್ಕೆ ಮಾಡುವ ದಿನದ ಕಾರ್ಯಕ್ಕೆ ಇವರು ದೀನ್‌ಕರಾಜ ಎಂದು ಕರೆಯುತ್ತಾರೆ. ಈ ದೀನ್‌ಕರಾಜ ಮಾಡುವದಿನ ಆಡಿನ ಬ್ಯಾಟಿ ಮಾಡಲೇಬೇಕೆಂಬ ಸಂಪ್ರದಾಯ ರೂಢಿಯಲ್ಲಿದೆ. ಅಲ್ಲದೆ ಈ ದಿನ ಸತ್ತ ವ್ಯಕ್ತಿಗೆ ಇಷ್ಟವಿರುವ ಪದಾರ್ಥಗಳಿಂದ ಅಡುಗೆ ಮಾಡಿ ಮತ್ತು ಆಡಿನ ಬ್ಯಾಟಿಯ ಮಾಂಸದಿಂದ ತಯಾರಿಸಿದ ಅಡಿಗೆಯನ್ನು ತೆಗೆದುಕೊಂಡು ಕುಣಿಯ ಹತ್ತಿರ ಹೋಗಿ, ಆ ಕುಣಿಗೆ ಪೂಜೆ ಸಲ್ಲಿಸಿ ಆ ಪದಾರ್ಥಗಳಿಂದ ನೈವೇದ್ಯ ಹಿಡಿದು ಬಾಳೆ ಎಲೆಯಲ್ಲಿ ಆ ಪದಾರ್ಥಗಳನ್ನು ಹಾಕಿ ಕುಣಿಯ ಮುಂದೆ ಇಡುತ್ತಾರೆ. ಕೆಲವು ಸಮಯಗಳ ಮೇಲೆ ಕಾಗೆ ಬಂದು ತಿಂದ ಮೇಲೆ ಕುಣಿಗೆ ಹೋದಂತಹ ಎಲ್ಲರು ವಾಪಾಸ್ ಮನೆಗೆ ಬರುತ್ತಾರೆ. ಮನೆಗೆ ಬಂದ ಮೇಲೆ ಸಮುದಾಯದ ಎಲ್ಲರೂ ಸೇರಿ ಊಟ ಮಾಡಿ ದಿನದ ಕಾರ್ಯ ಅಂತ್ಯಗೊಳಿಸುತ್ತಾರೆ.

**೨. ವಾರ್ಷಿಕಾವರ್ತನ ಆಚರಣೆಗಳು**

**ಅ. ಹಬ್ಬ**

ಸಾಮುದಾಯಿಕ ಬದುಕಿನಲ್ಲಿ ಜನಾಂಗದ ಐಹಿಕಸುಖ ಸಾಧನೆಯಲ್ಲಿ ಮತ್ತು ಪರಲೋಕದ (ಮುಕ್ತಿ) ಸುಖ ಪ್ರಾಪ್ತಿಗಳಲ್ಲಿ ಹಬ್ಬಗಳು ಬಹಳ ಪ್ರಮುಖವಾದ ಪಾತ್ರವಹಿಸುತ್ತವೆ. ಅಂತೆಯೇ ಜಗತ್ತಿನ ಎಲ್ಲ ಜನಾಂಗವು ದೇವರ ಪ್ರೀತ್ಯರ್ಥವಾಗಿ ಹಬ್ಬಗಳನ್ನು ಆಚರಿಸುತ್ತಾ ಬಂದಿರಬಹುದು. ಇವುಗಳನ್ನು ಆಚರಿಸಿದರೆ ಧರ್ಮವನ್ನು ಆಚರಿಸಿದಂತೆಯೇ ಎಂಬ ನಂಬಿಕೆಯಲ್ಲಿ ಹಬ್ಬ ಧರ್ಮದ ಆಚರಣೆಯಲ್ಲಿಯೇ ಬೆಳೆದು ಬಂದಂತೆ ತೋರುತ್ತದೆ.

ಮಾನವನ ನಿತ್ಯದ ಲೌಕಿಕ ಜೀವನದಿಂದ ಪಾರಮಾರ್ಥಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ

ಆಚರಿಸುತ್ತಾ ಬಂದ ಈ ಹಬ್ಬಗಳು ಅನೇಕ ಸಮುದಾಯಗಳ ಚರಿತ್ರೆಯನ್ನು ಕಟ್ಟಿ ಕೊಡುವಲ್ಲಿ ಬಹಳ ಪ್ರಮುಖವಾಗಿದೆ.

ಈ "ಹಬ್ಬ ಎನ್ನುವ ಶಬ್ದ ಸಂಸ್ಕೃತದ ಪರ್ವನ್ ಪದದ 'ತಬ್ಬವ'. ಪರ್ವ ಎಂದರೆ ಒಂದು ಇನ್ನೊಂದರ ಜೊತೆ ಸಂಧಿಸುವುದು ಎಂದರ್ಥ. ಚಂದ್ರ ಸೂರ್ಯರ ಗತಿಗಳು ಬದಲಾಗುವುದೇ ಪರ್ವ ಬಹುತೇಕ ಪುರಾತನ ಹಬ್ಬಗಳು (Ritual) ಫಲೋತ್ಪತ್ತಿ ಸಂಬಂಧಿಯಾಗಿದ್ದು ಅವು ಋತುಗತಿಯನ್ನು ಚಂದ್ರಸೂರ್ಯರ ಚಲನೆಯನ್ನು ಅವಲಂಬಿಸಿದವು. ಆ Ritualಗಳೇ ಮುಂದೆ ಹಬ್ಬಗಳಾದವು. ಪರ್ವ ಎಂಬ ಮಾತಿಗೆ ಹಬ್ಬ" ಎಂಬ ಅರ್ಥ ಬರಲು ಕಾರಣ ಸ್ಪಷ್ಟವಾಗಿದೆ.

ಬೈಲುಪತ್ತಾರರು ಎಲ್ಲ ಹುಣ್ಣಿಮೆ, ಅಮವಾಸ್ಯೆಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿರುವುದು ಕಂಡು ಬರುವುದಿಲ್ಲ. ಆದರೆ ವಿಶೇಷವಾಗಿ ಇವರು ಪ್ರತಿವರ್ಷ ಯುಗಾದಿ ಮಹಾನವಮಿ ಹಬ್ಬಗಳನ್ನು ಚಾಚೂ ತಪ್ಪದೆ ಮಾಡುವ ಸಂಪ್ರದಾಯ ರೂಢಿಯಲ್ಲಿದೆ. ಅಲ್ಲದೆ ಮುಸಲ್ಮಾನರ ಮೊಹರಂ ಹಬ್ಬವನ್ನು ಕೂಡಾ ಆಚರಿಸುತ್ತೇವೆ ಎಂದು ಹೇಳುತ್ತಾರೆ.

**೨.೧. ಯುಗಾದಿ ಹಬ್ಬ**

ಬೈಲುಪತ್ತಾರರು ಯುಗಾದಿ ಹಬ್ಬದ ಸಂದರ್ಭದಲ್ಲಿ ತಮ್ಮ ಮನೆಯಲ್ಲಿನ ಹಳೆಯ ಬಟ್ಟೆಗಳ ಕೌದಿಗಳನ್ನು ಸ್ವಚ್ಛಗೊಳಿಸಿರುತ್ತಾರೆ. ಹಬ್ಬದ ದಿನ ಮುಂಜಾನೆ ಎದ್ದು ತಮ್ಮ ಗುಡಾರ ಮತ್ತು ಗುಡಿಸಲುಗಳನ್ನು ಸಗಣಿಯಿಂದ ಸಾರಿಸಿ ತಮ್ಮ ಮನೆಗಳ ಮುಂದೆ ರಂಗೋಲಿ ಹಾಕುತ್ತಾರೆ. ಎಲ್ಲರ ಸ್ನಾನವಾದ ಮೇಲೆ ಶುಭ್ರವಾದ ಬಟ್ಟೆಗಳನ್ನು ತೊಟ್ಟುಕೊಳ್ಳುತ್ತಾರೆ. ಅನುಕೂಲವಾದರೆ ಹೊಸ ಬಟ್ಟೆಗಳನ್ನು ತಂದು ಹಾಕಿಕೊಳ್ಳುತ್ತಾರೆ. ಬಟ್ಟೆಗಳನ್ನು ತೊಟ್ಟುಕೊಂಡ ಮೇಲೆ ದೇವರನ್ನು ಇಟ್ಟು ಪೂಜಿಸುವ ಸ್ಥಳವನ್ನು ವಿಶೇಷವಾಗಿ ಸಿಂಗರಿಸಲಾಗುತ್ತದೆ. ಈ ಸಂದರ್ಭದಲ್ಲಿ ತಮ್ಮ ಕುಲದೇವರು, ಮನೆದೇವರುಗಳ ಮೂರ್ತಿ, ಫೊಟೋಗಳು ಮತ್ತು ವೃತ್ತಿ ಸಂಬಂಧಿ ಸಲಕರಣೆಗಳನಿಟ್ಟು ಸ್ವಲ್ಪ ಅಕ್ಕಿಯ ರಾಶಿಯನ್ನು ಹಸಿಗೆ ಹಾಕಿ ಆ ಅಕ್ಕಿಯ ಹಸಿಗೆಯ ಮೇಲೆ ಕುತ್ತಿಗೆ ತಂಬಿಗೆಯನಿಟ್ಟು ಅದರ ಮೇಲೆ ಸುತ್ತಲೂ ವೀಳ್ಯೆದೆಲೆಗಳನಿಟ್ಟು ಅಲ್ಲಿರುವ ಎಲ್ಲ ದೈವಿ ವಸ್ತುಗಳಿಗೆ ಕುಂಕುಮ, ಅರಿಷಿಣ, ವಿಭೂತಿ, ಹೂವು, ಕಾಯಿ, ಕರ್ಪೂರದೀಪ ಧೂಪಗಳಿಂದ ಆರತಿ, ಮಂಗಳಾರತಿ ಪದಗಳನ್ನು ಹಾಡುತ್ತಾ ಅಲ್ಲಿರುವ ಎಲ್ಲ ವಸ್ತುಗಳಿಗೆ ಪೂಜೆಸಲ್ಲಿಸಿ ನೈವೇದ್ಯಕ್ಕೆ ಹಿಡಿಯುವ ಸಂಪ್ರದಾಯ ರೂಢಿಯಲ್ಲಿದೆ.

ಎಲ್ಲಮ್ಮದೇವಿ **ಹಡಗಿಲು ತುಂಬುವ ಕಾರ್ಯ** : ಮನೆಯಲ್ಲಿ ತಮ್ಮ ವೃತ್ತಿ ಸಂಬಂಧಿ ಸಲಕರಣೆಗಳು ಮತ್ತು ದೈವಿಗಳ ಪೂಜೆ ಮುಗಿದ ಮೇಲೆ ಎಲ್ಲಮ್ಮನ ಹಡಿಗಿಲು ತುಂಬುವ ಕಾರ್ಯ ನಡೆಯುತ್ತದೆ. ಎಲ್ಲಮ್ಮನ ಹಡಗಿಲು ತುಂಬಿಸಿಕೊಂಡು ಹೋಗುವುದಕ್ಕೆ ಮತಂಗಿಯರು ಬರುತ್ತಾರೆ. ಈ ಮತಂಗಿಯರು ಹೊಲೆಯ ಸಮುದಾಯಕ್ಕೆ ಸೇರಿದವರಾಗಿರುತ್ತಾರೆ. ಇವರು ಬರುವಾಗ ಎರಡು ಚಿಕ್ಕ

ಬಿದರಿನ ಹೊಸ ಬುಟ್ಟಿಗಳನ್ನು ತೆಗೆದುಕೊಂಡು ಬರುತ್ತಾರೆ. ಇವರು ಬಂದ ಮೇಲೆ ಬೈಲುಪತ್ತಾರ ಸಮುದಾಯದವರು ಆ ಎರಡು ಹೊಸ ಬಿದರಿನ ಬುಟ್ಟಿಗಳಲ್ಲಿ, ಒಂದರಲ್ಲಿ ಒಣ ಪದಾರ್ಥಗಳಾದ ಗೋದಿ ಹಿಟ್ಟು, ಅಕ್ಕಿ, ಬ್ಯಾಳಿ, ಬೆಲ್ಲಾ ಇನ್ನಿತರ ದವಸ ಧಾನ್ಯಗಳನ್ನು ಮತ್ತು ಉಳ್ಳಾಗಡಿಗಳನ್ನು ತುಂಬಿ ಇದಕ್ಕೆ ಒಣ ಹಡಿಗಿಲ್ಲು ಎಂದು ಕರೆಯುತ್ತಾರೆ. ಇನ್ನೊಂದರಲ್ಲಿ ತಮ್ಮ ಮನೆಯಲ್ಲಿ ಮಾಡಿದ ಅಡಿಗೆಯ ಪದಾಥಗಳಾದ ಹೋಳಿಗೆ, ಕಡಬು, ಹಪ್ಪಳ, ಸೊಂಡಿಗೆ, ಅನ್ನ. ಹುಗ್ಗಿಗಳನ್ನು ತುಂಬಿ ಇದಕ್ಕೆ ಹಸಿ ಹಡಿಗಲು ಎಂದು ಕರೆಯುತ್ತಾರೆ.

ಈ ಎರಡು ಬುಟ್ಟಿಗಳ ಹಡಿಗಿಲು ತುಂಬಿದ ಮೇಲೆ ಆ ಬುಟ್ಟಿಗಳಿಗೆ ಕುಂಕುಮ, ಗಂಥ, ಅರಿಷಿಣಗಳನ್ನು ಹಚ್ಚಿ ಹೂಗಳನ್ನು ಹಾಕಿ ಕರ್ಪೂರದಿಂದ ಬೆಳಗಿ ಪೂಜೆ ಸಲ್ಲಿಸಲಾಗುತ್ತದೆ. ತದನಂತರ ಮಾತಂಗಿಯರಿಗೆ ದಂಡಿಯನುಕಟ್ಟಿ ಒಬ್ಬರಿಗೊಬ್ಬರು ಕುಂಕುಮ ಹಚ್ಚುವುದರೊಂದಿಗೆ ಮಾತಂಗಿಯರಿಗೆ ಕುಪ್ಪಸ, ತಮಗೆ ಅನುಕೂಲವಾದಷ್ಟು ದೇಣಿಗೆ ರೂಪದಲ್ಲಿ ಹಣವನ್ನು ಕೊಟ್ಟು ಗೌರವಿಸಿ ಆ ಹಡಗಿಲು ತುಂಬಿದ ಬುಟಿಗಳೊಂದಿಗೆ ಮಹಾತಂಗಿಯರಿಗೆ ಮನೆಗೆ ಕಳಿಸಲಾಗುತ್ತದೆ.

ಕೊನೆಗೆ ತಮ್ಮ ಮನೆಯಲ್ಲಿ ತಯಾರಿಸಿದ ಬೆವು ಬೆಲ್ಲ, ಹೊಳಿಗೆ, ಕಡಬು, ಹಪ್ಪಳಾ, ಸೆಂಡಿಗೆ, ಅನ್ನ ಸಾರು ಎಲ್ಲರು ಕುಳಿತುಕೊಂಡು ಊಟಮಾಡುತ್ತಾರೆ. ಆ ದಿನ ಎಲ್ಲರೂ ಸಂಭ್ರಮದಿಂದ ಜೋಕಾಲಿ ಆಟ, ಒಗಟುಗಳು, ಹಾಡುಗಳನ್ನು ಹಾಡುತ್ತಾ ಸಂತೋಷದಲ್ಲಿರುತ್ತಾರೆ.

ಯುಗಾದಿ ಹಬ್ಬದ ಮರುದಿನ ಕರಿ ಎಂದು ಆಚರಣೆ ಮಾಡುತ್ತಾರೆ. ಈ ಕರಿಯ ದಿನ ಕೋಳಿ ಬ್ಯಾಟಿಯ ಮಾಂಸದ ಆಹಾರ ಇಲ್ಲವೇ ಖರೀದಿ ತಂದ ಮಾಂಸದ ಆಹಾರವನ್ನು ತಯಾರಿಸಿ ಊಟಮಾಡಿ ಮಧ್ಯಪಾನ ಮಾಡುತ್ತಾರೆ.

ಸಮುದಾಯದಲ್ಲಿ ಎಲ್ಲಮ್ಮನ ಹಡಗಿಲು ತುಂಬುವ ಕಾರ್ಯಕ್ರಮವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಎಲ್ಲ ರೀತಿಯಿಂದ ಶೋಷಣೆಗೆ ಒಳಗಾದ ಹೊಲಿಯಾ ಸಮುದಾಯದ ಹೆಣ್ಣು ಮಕ್ಕಳಿಗೆ ಅತ್ಯಂತ ಪ್ರೀತಿಪೂರ್ವಕವಾಗಿ ಆಧಾರದಿಂದ ಸ್ವಾಗತಿಸಿ ತಮ್ಮ ಕುಲದೇವಿ ರೂಪವಾದ ಎಲ್ಲಮ್ಮ ತಾಯಿಯ ಸ್ಥಾನಮಾನಗಳನ್ನು ಕೊಟ್ಟು ಆ ಸಮುದಾಯದ ಹೆಣ್ಣು ಮಕ್ಕಳಿಗೆ ಮಾತಂಗಿಯರು ಎಂದು ಕೌರವ ಪೂರ್ವಕವಾಗಿ ಗೌರವಿಸುವದರೊಂದಿಗೆ ಶೋಷಣೆಗೆ ಒಳ್ಳಗಾದ ಸಮುದಾಯದ ಗೌರವವನ್ನು ಕಾಪಾಡುವ ಸನ್ನಿವೇಶ ಬೈಲುಪತ್ತಾರ ಸಮುದಾಯದಲ್ಲಿ ಕಂಡುಬರುತ್ತದೆ ಎಂದು ಹೇಳಬಹುದು.

### ೨.೨. ಮಹಾನವಮಿ

ಬೈಲುಪತ್ತಾರ ಸಮುದಾಯದಲ್ಲಿ ತಮ್ಮ ವೃತ್ತಿ ಸಂಬಂಧಿತ ಸಲಕರಣೆಗಳಿಗೆ ವರ್ಷಕ್ಕೆ ಎರಡುಸಲ ಪೂಜೆ ಸಲ್ಲಿಸುವ ಸಂಪ್ರದಾಯ ರೂಢಿಯಲ್ಲಿದೆ. ಮೊದಲು ಆರಂಭಿಕ ವರ್ಷದ ಯುಗಾದಿ ಹಬ್ಬದಲ್ಲಿ,

ಎರಡನೆಯದಾಗಿ ಮಹಾನವಮಿ ಹಬ್ಬದಲ್ಲಿ ಪೂಜೆ ಸಲ್ಲಿಸುತ್ತಾರೆ. ಈ ಮಹಾನವಮಿ ಹಬ್ಬದ ಸಂದರ್ಭದಲ್ಲಿ ತಮ್ಮ ಮನೆಯಲ್ಲಿನ ಬಟ್ಟೆ ಕೌದಿಗಳನ್ನು ಸ್ವಚ್ಛಗೊಳಿಸಿ, ಮನೆಗಳನ್ನು ಸಗಣಿಯಿಂದ ಸಾರಿಸಿ ಅಂಗಳಕ್ಕೆ ರಂಗೋಲಿ ಹಾಕುತ್ತಾರೆ. ಪೂಜೆ ಗೊತ್ತುಪಡಿಸಿಕೊಂಡ ಸ್ಥಳದಲ್ಲಿ ತಮ್ಮ ವೃತ್ತಿ ಸಂಬಂಧಿತ ಸಲಕರಣೆಗಳನಿಟ್ಟು ಅವುಗಳನ್ನು ಮಹಾಕಾಳಿಯ ಪ್ರತಿರೂಪವೆಂದು ಪೂಜೆ ಭಾವನೆಯಿಂದ ಪೂಜೆಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ವೃತ್ತಿ ಸಲಕರಣೆಗಳಿಗೆ ಶಾಂತಿಗಾಗಿ ಕೋಳಿಯ ಬಲಿ ಕೊಡುವ ಸಂಪ್ರದಾಯ ರೂಢಿಯಲ್ಲಿದೆ ಎಂದು ಹಾಲಿಗೇರಿ ವಕ್ತೃಗಳಾದ ಹುಸೇನಪ್ಪನವರು ಹೇಳುತ್ತಾರೆ.

ಅಲ್ಲದೆ ತಮ್ಮ ಕುಲಶಕ್ತಿ ದೇವತೆಗಳಾದ ಎಲ್ಲಮ್ಮ, ಅಂಭಾಭವನಿ, ದುರಗಮ್ಮ ದೇವಿಯ ಹೆಸರಿನಲ್ಲಿ ಎರಡು ದಿನ ಇಲ್ಲವೇ ಐದು ದಿನಗಳವರೆಗೆ ಎಣ್ಣೆಯ ಅಥವಾ ತುಪ್ಪದ ದೀಪವನ್ನು ಅಲಂಕಾರಗೊಂಡ ದೇವಿಯ ಮುಂದೆ ಹಚ್ಚಲಾಗುತ್ತದೆ. ಈ ದೀಪಗಳನ್ನು ಆರದ ಹಾಗೆ ಅವರ ಸಾಂಪ್ರದಾಯಿಕ ದಿನಗಳು ಮುಗಿಯುವವರೆಗೆ ಕಾಯುತ್ತಾರೆ. ಈ ಸಂದರ್ಭದಲ್ಲಿ ಮುತ್ತೈದೆಯರನ್ನು ಊಟ ಮಾಡಿಸುವ ಸಂಪ್ರದಾಯ ಅನುಸರಿಸುತ್ತಾರೆ. ಇವರು ತಮ್ಮಗೆ ಬೇಕಾದ ಯಾರಾದರು ಇಬ್ಬರೂ ಮುತ್ತೈದೆಯರನ್ನು ಕರೆಸಿ, ಅವರಿಗೆ ದಂಡಿಕಟ್ಟಿ ಹಸಿರು ಬಳೆ ಕುಪ್ಪಸಗಳನ್ನು ಕೊಟ್ಟು ಕುಂಕುಮ ಹಚ್ಚಿ ಆರತಿ ಬೆಳಗಲಾಗುತ್ತದೆ. ಆ ಮೇಲೆ ತಮ್ಮ ಮನೆಯಲ್ಲಿ ಮಾಡಿದ ಹೋಳಿಗೆ, ಕಡಬು, ಅನ್ನ, ಸಾರು ಊಟ ಮಾಡಿಸಲಾಗುತ್ತದೆ. ಕೊನೆಯಲ್ಲಿ ಮುತ್ತೈದಿಯರು ಮನೆಗೆ ಹೋಗುವಾಗ ನಿಮ್ಮ ಮುತ್ತೈದೆತನ ಗಟ್ಟಿಯಾಗಿರಲಿ ಎಂದು ಶುಭ ಹಾರೈಸಿ ಹೋಗುತ್ತಾರೆ.

### ೨.೩. ಮೊಹರಂ ಹಬ್ಬ

ಸರ್ವಧರ್ಮಗಳ ಸಮನ್ವಯಕರೂ ಹಾಗೂ ಆರಾಧಕರು ಆಗಿರುವ ಬೈಲುಪತ್ತಾರರು ಮುಸಲ್ಮಾನರ ಮೊಹರಂ ಹಬ್ಬವನ್ನು ತುಂಬಾ ಶ್ರದ್ಧಾ ಭಕ್ತಿಯಿಂದ ಆಚರಿಸುತ್ತಾರೆ. ಅಮವಾಸ್ಯೆಯಾಗಿ ಚಂದ್ರ ಕಂಡನೆಂದರೆ ಗುದ್ದಲಿ ಬಿದ್ದ ಮೇಲೆ ಅಲಾಯ ಕುಣಿಗೆ ಹೋಗಿ ಭಕ್ತಿ ಭಾವಗಳಿಂದ ನಮಸ್ಕರಿಸಿ ಬರುತ್ತಾರೆ. ಕುಣಿಯುವ ಆಸಕ್ತಿ ಇರುವವರು, ಅಲಾಯಿಲು ಕುಣಿತದಲ್ಲಿ ಭಾಗಿಗಳಾಗುತ್ತಾರೆ. ತಮ್ಮ ಅನುಕೂಲಗಳಿಗೆ ತಕ್ಕಂತೆ ಮನೆಯಲ್ಲಿ ಗೋದಿಯ ಮಾಲದಿ, ಚಿತ್ರನ್ನ, ಹಪ್ಪಳ ಮಾಡಿ ಅಲಾಯಿ ದೇವರಿಗೆ ನೈವೇದ್ಯಕ್ಕೆ ಹಿಡಿದು ಬರುತ್ತಾರೆ. ಕೆಲವರು ಪಕೀರಗಳನ್ನು ಕರೆಸಿ ಊಟಮಾಡಿಸುತ್ತಾರೆ. ಹರಕೆ ಹೋತ್ತವರು ಕುರಿ ಕೋಳಿ ಬಲಿ ಕೊಡುವ ಸಂಪ್ರದಾಯ ಅನುಸರಿಸುತ್ತಾರೆ.

### ಆ. ದೈವಗಳು-ಜಾತ್ರೆ-ಉತ್ಸವಗಳು

ದೇವತೆಗಳು ಮತ್ತು ದೇವರುಗಳನ್ನು ಒಂದು ಸೀಮಿಗೆ ಸಂಬಂಧಿಸಿದ್ದು ಎಂದು ಹೇಳಬಹುದು. ಆದರೆ ಒಂದು ಸಮುದಾಯಕ್ಕೆ ಸಂಬಂಧಿಸಿದ್ದು ಎಂದು ಹೇಳುವುದು ಕಷ್ಟದ ಕೆಲಸ. ಏಕೆಂದರೆ, ದೇವತೆಗಳು, ದೇವರುಗಳು ಮಾನವನ ಮಾನಸಿಕ ಭಾವನೆಗೆ ಸಂಬಂಧಿಸಿದ್ದು. ಬೈಲುಪತ್ತಾರರು

ನಡೆದುಕೊಳ್ಳುವ ಎಲ್ಲಮ್ಮ, ಅಂಭಾಭವನಿ, ಸೆಟಿಗೆಮ್ಮ, ಮುರುಗಮ್ಮ, ದುರ್ಗಮ್ಮ, ಹನುಮಂತ, ವಡ್ಡಿಜಗನ್ನಾಥ, ನರಸಿಂಹ ಸ್ವಾಮಿ, ದೇವರುಗಳಿಗೆ ಸಾಮಾನ್ಯವಾಗಿ ವಿವಿಧ ರೀತಿಯ ಜನಸಮುದಾಯದವರು ಬಹಳ ಭಯ ಭಕ್ತಿಯಿಂದ ನಡೆದುಕೊಂಡು ಇದು ನಮ್ಮ ಕುಲದೇವರು, ನಮ್ಮ ಮನೆಯ ದೇವರು ಎಂದೂ ಹೇಳುತ್ತಾರೆ. ಹೀಗಿರುವಾಗ ಈ ದೇವರುಗಳು ಒಂದು ಸಮುದಾಯಕ್ಕೆ ಸಂಬಂಧಪಟ್ಟಿವೆ ಎಂದು ಹೇಳುವುದು ಕಷ್ಟದ ಕೆಲಸ.

ಬೈಲುಪತ್ತಾರರು ತಮ್ಮ ಹಿಂದೂ ದೇವರುಗಳ ಜೊತೆಯಲ್ಲಿ ಮುಸ್ಲಿಂ ದೇವರುಗಳಿಗೂ ಕೂಡಾ ಬಹಳ ಭಯ ಭಕ್ತಿಯಿಂದ ನಂಬಿಕೆಯಿಟ್ಟು ಪೂಜೆ ಮಾಡುವುದರೊಂದಿಗೆ "ಹರಕ್ಕೆ ಹೊರುವ" ಸಂಪ್ರದಾಯ ಅನುಸರಿಸುತ್ತಾರೆ.

ಕೋಷ್ಟಕ ೪.೧ ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸ್ತ್ರೀ ದೈವಗಳು

| ಸ್ತ್ರೀ ದೈವಗಳು | ದೈವಗಳ ನೆಲೆಗಳು |
|---|---|
| ೧. ಎಲ್ಲಮ್ಮ | ಮಾಹೋರ್ (ಜೇವರ್ಗಿ ತಾಲೂಕು) |
| | ಕೊತ್ತಾಲಾಪುರ |
| | ಸೌದತ್ತಿ (ಬೆಳಗಾವಿ ಜಿಲ್ಲೆ) |
| | ನಾಗವಿ (ಚಿತ್ತಾಪೂರ ತಾಲೂಕು) |
| | ಸಾಗರ (ಶಹಾಪುರ್ ತಾಲೂಕು) |
| ೨. ಅಂಭಾ ಭವಾನಿ | ತುಳಾಜಾಪುರ (ಮಹಾರಾಷ್ಟ್ರ) |
| ೩. ದುರಗಮ್ಮ | ಅಲ್ಲೂರ್ (ಚಿತ್ತಾಪುರ) |
| ೪. ಕಾಳಮ್ಮ | ಸಿರಸಂಗೀ, ಚಿಮಣಗೇರಿ |
| ೫. ಅಡಿವಿ ಸೇಟಿಗೆಮ್ಮ ಅಥವಾ ಕರಿಲಕ್ಷ್ಮಿ | ತಾವು ನೆಲೆಸಿರುವ ಊರಿನ ಅಡವಿಯಲ್ಲಿ ಅಥವಾ ಹಳದ ಸಮೀಪದಲ್ಲಿ ಮಾಡುತ್ತಾರೆ |
| ೬. ಪಡೇಮ್ಮ | |

ಕೋಷ್ಟಕ ೪.೨ ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಪುರುಷ ದೈವಗಳು

| ಪುರುಷ ದೈವಗಳು | ನೆಲೆಗಳು |
|---|---|
| ೧. ವಡ್ಡಿ ಜಗನ್ನಾಥ | ಮೂಲ ದೇವರು (ಪುರಿ ಜಗನ್ನಾಥ) |
| ೨. ಆಂಜನೇಯ | ಊರಿನ ಹನುಮಂತ, ಬೈಲು ಹನುಮಂತ |
| ೩. ನರಸಿಂಹಸ್ವಾಮಿ | ಬೀದರ್ |
| ೪. ಭೀಮರಾಯ | ಮೊತಕಪಲ್ಲಿ (ಸೇಡಂ ತಾಲೂಕು) |
| ೫. ಮೌನೇಶ | ತಿಂತಿಣಿ (ಸುರುಪುರು ತಾಲೂಕು) |

ಕೋಷ್ಟಕ ೪.೧ ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಇಸ್ಲಾಂ ದೈವಗಳು

| ಇಸ್ಲಾಂ ದೇವರುಗಳು | ನೆಲೆಗಳು |
|---|---|
| ೧. ಇಸ್ಮಾಯಿಲ್ ಖಾದ್ರಿ | ಘೋಡವಾಡಿ ಬೀದರ ಜಿಲ್ಲೆ |
| ೨. ಹುಸೇನ್‌ಭಾಷ್ | ಮಂಗಾಲಿ |
| ೩. ಖಾಸಿಂ | ಬಳಿಚಕ್ರ ದರಗಾ ದೇವರು |
| ೪. ಬಂದಿಗೀ ಸಾಹೇಬ | ಹತ್ತಿಕುಣಿ ದರಗಾ ದೇವರು |
| ೫. ಮೌಲಾಲಿ | |
| ೬. ದಾವಲ್‌ಮಲ್ಲಿಕ್ | |

೧. ಎಲ್ಲಮ್ಮ ದೇವರು : 'ಸ್ತ್ರೀ' ಶಕ್ತಿದೇವತೆಗಳ ಆರಾಧಕರಾದ ಬೈಲುಪತ್ತಾರರು ಬಹುಸಂಖ್ಯಾತ ಜನ ಎಲ್ಲಮ್ಮ ದೇವಿಗೆ ನಡೆದುಕೊಳ್ಳುವ ಸಂಪ್ರದಾಯ ರೂಢಿಯಲ್ಲಿದೆ. ಇವರು ತಾವು ನೆಲೆಸಿರುವ ಪ್ರದೇಶಗಳಿಗೆ ಸಮೀಪವಿರುವ ಮತ್ತು ತಮ್ಮ ಭಾವನೆಗಳಿಗೆ ಸ್ಪಂದಿಸುವ ಎಲ್ಲಮ್ಮ ದೇವಿಗೆ ಬಹಳ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಅಲ್ಲಿ ನಡೆಯುವ ಜಾತ್ರೆಗಳಿಗೆ ಅನುಕೂಲವಿದ್ದವರು ಪ್ರತಿವರ್ಷ ಹೋಗುತ್ತಾರೆ. ಅನಾನುಕೂಲವಿದ್ದವರು ಕನಿಷ್ಠ ಮೂರು ವರ್ಷಗಳಿಗೆ ಒಂದು ಸಲವಾದರು ಹೋಗುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ದೇವಿಗೆ ಹೂ, ಹಣ್ಣು, ಹಸಿರುಬಳೆಗಳು, ದಟ್ಟಿ ಸೀರೆ ಕಾಯಿ, ಕರ್ಪೂರಗಳನ್ನು ತಂದು ಅರ್ಪಿಸಿ ಹೋಗುತ್ತಾರೆ.

ಆದರೆ 'ಹರಕೆ' ಹೊತ್ತುಕೊಂಡುವರು ಜಾತ್ರೆಯ ಸಂದರ್ಭದಲ್ಲಿ 'ಹರಕೆ' ತೀರಿಸುವದಿಲ್ಲ ತಮ್ಮಗೆ ಅನುಕೂಲವಿದ್ದ ಬೇರೆ ದಿನಗಳಲ್ಲಿ 'ಹರಕೆ' ಸಲ್ಲಿಸುತ್ತಾರೆ. ಹರಕೆಯು ಹೆಚ್ಚಾಗಿ ಗುಡಿಗೆ ಬಂದು ಅಡಿಗಿಲು ತುಂಬಿಸುವದ್ದಾಗಿ ಬೇಡಿಕೊಳ್ಳುವ ಸಂಪ್ರದಾಯ ಅನುಸರಿಸುತ್ತಾರೆ. ಗುಡಿಯಲ್ಲಿ ಹಡಿಗಿಲು ತುಂಬಿಸುವ ದಿನ ಗುಡಿಯ ಒಂದು ಭಾಗದಲ್ಲಿ ಹೋಳಿಗೆ, ಕಡಬು, ಅನ್ನಸಾರು, ಹುಗ್ಗಿಗಳನ್ನು ಮಾಡಿ ದವಸಧಾನ್ಯಗಳನ್ನು ನೆನೆಯಿಸಿ ತೋಹಿಸಿ ಹಡಿಗಿಲು ತುಂಬುವ ಗಡಿಗೆಯಲ್ಲಿ ಹಾಕಿ ಗುಡಿಯ ಸುತ್ತಲೂ ವಾದ್ಯ ಮೇಳಗಳೊಂದಿಗೆ ಐದು ಸುತ್ತು ಪ್ರದಕ್ಷಿಣೆ ಹಾಕಿದ ಮೇಲೆ ದೇವಿಗೆ ಹೂ, ಹಣ್ಣು, ದಂಡಿ, ದಟ್ಟಿ(ಸೀರೆ)ಗಳಿಂದ ಅಲಂಕರಿಸಿ ಅರ್ಪಿಸಿ ಕಾಯಕರ್ಪೂರಗಳಿಂದ ಪೂಜೆಸಲ್ಲಿಸಿ ತುಂಬಿದ ಎಲ್ಲಮ್ಮನ ಹಡಿಗಿಲು ದೇವಿಗೆ ಅರ್ಪಿಸುವ ಸಂಪ್ರದಾಯ ಅನುಸರಿಸುತ್ತಾರೆ.

೨. ಅಂಭಾ ಭವಾನಿ : ಬೈಲುಪತ್ತಾರ ಸಮುದಾಯದವರು ತುಳಜಪುರ ಅಂಭಾಭವಾನಿ ನಡೆದುಕೊಳ್ಳಲು ಸಂಪ್ರದಾಯ ರೂಢಿಯಲ್ಲಿದೆ. ಇವರು ತುಳಜಾಪುರ ಅಂಭಾಭವಾನಿ ಜಾತ್ರೆಗೆ ಅನುಕೂಲವಾದರೆ ಮಾತ್ರ ಹೋಗುತ್ತಾರೆ. ಆದರೆ ಹರಕೆ ಹೊತ್ತವರು ಹೋಗಿ ಹರಕೆ ತಿರಿಸಿಯೇ ಬರಬೇಕೆಂಬ ಸಂಪ್ರದಾಯ ರೂಢಿಯಲ್ಲಿದೆ. ಸಾಮಾನ್ಯವಾಗಿ ಇವರು ತುಳಜಾ ಭವಾನಿಗೆ ಬ್ಯಾಟಿ ಮಾಡುವ ಹರಕೆ ಹೊರುತ್ತಾರೆ.

ಬ್ಯಾಟಿ ಮಾಡುವ ಹರಕೆ ಹೊತ್ತವರು ತುಳಜಾಭವಾನಿ ಗುಡಿಯಲ್ಲಿ ಬ್ಯಾಟಿ ಮಾಡುವದಿಲ್ಲ ಆದರೆ ಪೂಜಾರಿಯ ಮನೆಯಲ್ಲಿ ಹರಕೆ ಹೊತ್ತ ಕುರಿ ಕತ್ತರಿಸಲಾಗುತ್ತದೆ. ಆ ಮಾಂಸವನ್ನು ದೇವಿಗೆ ನೈವೇದ್ಯ ಹಿಡಿದ ಬಳಿಕ ಪುನಃ ಆ ಪೂಜಾರಿಯ ಮನೆಯಲ್ಲಿಯೇ ಹೋಗಿ ಊಟ ಮಾಡುತ್ತಾರೆ. ನೈವೇದ್ಯ ಹಿಡಿಯುವ ಸಂದರ್ಭದಲ್ಲಿ ದೇವಿಗೆ ಮುತ್ತುಗಳು, ಹಸಿರು ಬಳೆ, ಕಾಯಿಕರ್ಪೂರ, ದಂಡಿ, ಕುಂಕುಮ, ಅರಿಷಿಣ, ದಟ್ಟಿಗಳನ್ನು ಅರ್ಪಿಸಿ ಬರುವ ಸಂಪ್ರದಾಯ ಅನುಸರಿಸುತ್ತಾರೆ.

ತಮ್ಮ ಸ್ವಂತ ಊರಿಗೆ ಬಂದ ಮೇಲೆ ಒಂದು ವಾರ ತಿರುಗುವುದರ ಒಳಗಾಗಿ ತುಳಜಾಪುರ ದೇವಿಯ ಗುಡಿಯಿಂದ ತಂದ ತೆಂಗಿನಕಾಯಿಗೆ ಪೂಜೆ ಮಾಡುವ ಸಂಪ್ರದಾಯ ರೂಢಿಯಲ್ಲಿದೆ. ಈ ಪೂಜೆ ಮಂಗಳವಾರ ಇಲ್ಲವೆ ಶುಕ್ರವಾರ ನೆರವೆರಿಸಲಾಗುತ್ತದೆ ಮತ್ತು ಈ ದಿನ ಹಸಿಪಡಾ ಅಂದರೆ ಬಿದಿರು ಬುಟ್ಟಿಯಲ್ಲಿ ಮಾಡಿದ ಅಡಿಗೆಯನ್ನು ತುಂಬಿ ಮಾತಂಗಿಯರಿಗೆ ಕರೆಸಿ ತಮ್ಮ ಸಂಪ್ರದಾಯದ ಪದ್ಧತಿಗಳ ಪ್ರಕಾರ ಮಾತಂಗಿಯರನ್ನು ಗೌರವಿಸಿ ಬಿದಿರು ಬುಟ್ಟಿಯಲ್ಲಿ ತುಂಬಿದ 'ಹಸಿಪಡಾ'ವನ್ನು ಮಾತಂಗಿಯರಿಗೆ ಕೊಟ್ಟು ಕಳಿಸುವ ಸಂಪ್ರದಾಯ ಅನುಸರಿಸುತ್ತಾರೆ.

೩. **ಅಡವಿ ಸೇಟಿಗೆಮ್ಮ ಅಥವಾ ಕರಿಲಕ್ಷ್ಮಿ :** ಬೈಲುಪತ್ತಾರರು ತಾವು ನೆಲೆಸಿರುವ ಪ್ರದೇಶದಲ್ಲಿ ಹಳ ಮತ್ತು ಉತ್ತಿನಗಡ್ಡಿ ಇರುವ ಸ್ಥಳಕ್ಕೆ ಹೋಗಿ ಎರಡು ತಂಬಿಗೆಯಲ್ಲಿ ನೀರು ತುಂಬಿ ಆ ತಂಬಿಗೆಯ ಮೇಲೆ ವಿಳ್ಯೆದೆಲೆಗಳನ್ನು ಎರಡು ತಂಬಿಗೆಗಳಿಗೆ ಸೇಟಿಗಳಮ್ಮನ ಪದಕಳನ್ನು ಮಾಡಿ ತಂಬಿಗೆಯ ಕುತ್ತಿಗೆಗೆ ಕಟ್ಟಿ ಸೇಟಿಗ್ಯಮ್ಮನ ಪೂಜೆ ಮಾಡುತ್ತವ ಸಂಪ್ರದಾಯ ಅನುಸರಿಸುತ್ತಾರೆ. ಪೂಜೆ ಸಲ್ಲಿಸುವುದಕ್ಕಿಂತ ಮೊದಲು ಗೊತ್ತುಪಡಿಸಿಕೊಂಡ ಉತ್ತಿನಗಡ್ಡಿಗೆ ಕಬ್ಬಿನ ಹಂದರ ಹಾಕಿ ಕಬ್ಬಿನ ರವದಿಗಳನ್ನು ಜೊಡಿಸಿ ಒಂದೇ ಕಡೆಗೆ ಕಟ್ಟುತ್ತಾರೆ. ಆ ಮೇಲೆ ಅವುಗಳ ಕೆಳಗೆ ತಂಬಿಗೆಗಳನ್ನು ಇಟ್ಟು ಪೂಜಿಸುತ್ತಾರೆ. ಆ ತಂಬಿಗೆಗಳಿಗೆ ಹೂವಿನ ದಂಡೆಗಳನ್ನು ಕಟ್ಟಿ ಹಸಿರು ಬಳೆ, ದಟ್ಟಿಯನ್ನು ಅಲ್ಲಿಟ್ಟು ಆ ತಂಬಿಗೆಗಳಿಗೆ ಸಿಂಗಾರಿಸಿ ಆಡಿನ ಬ್ಯಾಟಿಯನ್ನು ಕತ್ತರಿಸಲಾಗುತ್ತದೆ. ಬ್ಯಾಟಿಯ ರಕ್ತದ ತಿಲಕವನ್ನು ದೇವಿಗೆ ಅರ್ಪಿಸಿದ ಮೇಲೆ ಎಣ್ಣೆ ಹೋಳಗಿಯಿಂದ ಮಾಡಿದ ನೈವೇದ್ಯ ಹಿಡಯಲಾಗುತ್ತದೆ. ನಂತರ ಬ್ಯಾಟಿಯ ಆಡಿನ ಮಾಂಸವನ್ನು ಅಡಿಗೆ ಮಾಡಿ ಬಂದಂತಹ ಎಲ್ಲರೂ ಅಲ್ಲಿಯೇ ಊಟಮಾಡಿ ಬರುವ ಸಂಪ್ರದಾಯ ಅನುಸರಿಸುತ್ತಾರೆ. ಕೊನೆಯಲ್ಲಿ ಉಳಿದಂತಹ ಅಡಿಗೆ ಪದಾರ್ಥಗಳನ್ನು ಮನೆಗೆ ತರದೆ ಅಲ್ಲಿಯೇ ನೆಲದಲ್ಲಿ ಊಳಿಯಿಟ್ಟು ಬರುವ ಸಂಪ್ರದಾಯವಿದೆ ಎಂದು ವಕ್ತೃಗಳಾದ ಕೃಷ್ಣಪ್ಪನವರು ಹೇಳುತ್ತಾರೆ. ಈ ಸಂದರ್ಭಗಳಲ್ಲಿ ವಾದ್ಯ ಮೇಳಗಳನ್ನು ಕೂಡಾ ತೆಗೆದುಕೊಂಡು ಹೋಗಿರುತ್ತಾರೆ ಎಂದು ಹೇಳುತ್ತಾರೆ.

೪. **ಮುರುಗಾಂಬಿಕಾ ದೇವಿ :** ಮುರುಗಾಂಬಿಕಾ ದೇವಿಗೆ ನಡೆದುಕೊಳ್ಳುವ ಬೈಲುಪತ್ತಾರರು, ಮುರುಗಾಂಬಿಕಾ ದೇವಿಗೆ ಕೋಳಿ ಬಿಡುವ ಸಂಪ್ರದಾಯ ಅನುಸರಿಸುವುದು ರೂಢಯಲ್ಲಿದೆ. ಹರಕೆ ಹೊತ್ತವರು ದೇವಿಗೆ ಕೋಳಿಯನ್ನು ಅರ್ಪಿಸುವ ಪದ್ಧತಿ ಅನುಸರಿಸುತ್ತಾರೆ. ಹರಕೆ ಸಲ್ಲಿಸುವ ದಿನ

ಬೆಳಿಗ್ಗೆ ಎದ್ದು ಸ್ನಾನ ಮಾಡಿಕೊಂಡು ಶುದ್ಧವಾದ ಬಟ್ಟೆಗಳನ್ನು ತೊಟ್ಟುಕೊಂಡು ತಾವು ಬಿಡುವ ಹರಕೆಯ ಕೋಳಿಯನ್ನು ಮುರುಗಾಂಬಿಕ ದೇವಿಯ ಗುಡಿಗೆ ತೆಗೆದುಕೊಂಡು ಹೋಗಿ ದೇವಿಗೆ ಪೂಜೆಸಲ್ಲಿಸಿದ ಮೇಲೆ ಆ ಕೋಳಿಯ ಕೊರಳಿನಲ್ಲಿ ಮಲ್ಲಿಗೆಯ ಹೂವಿನ ಹಾರವನ್ನು ಹಾಕಿ ಹಾರಿಸಿ ಬಿಡುತ್ತಾರೆ. ಬೈಲುಪತ್ತಾರರು ಹರಕೆ ಸಲ್ಲಿಸಿ ಮನೆಗೆ ಹಿಂದಿರುಗುವ ಸಂಪ್ರದಾಯ ಅನುಸರಿಸುತ್ತಾರೆ. ನಂತರ ಪೂಜಾರಿಯಾದವರು ಆ ಕೋಳಿಯನ್ನು ತಮ್ಮ ಮನೆಗೆ ತೆಗೆದುಕೊಂಡು ಹೋಗುತ್ತಾರೆ.

೫. ಕಾಳಮ್ಮದೇವಿ : ಬೈಲುಪತ್ತಾರರು ವೃತ್ತಿ ಸಂಬಂಧಿತ ಸಲಕರಣೆಗಳನ್ನು ಕಾಳಮ್ಮನ ರೂಪವೆಂದು ಪೂಜ್ಯ ಭಾವನೆಯಿಂದ ತಮ್ಮ ಸಲಕರಣೆಗಳಿಗೆ ಭಕ್ತಿ ಭಾವವನ್ನು ತೊರಿಸುತ್ತಾರೆ. ಅಲ್ಲದೆ ಸಿರಸಂಗಿ ಕಾಳಮ್ಮ, ಚಿಮಣಗೇರಿ ಕಾಳಮ್ಮನನ್ನು ಭಕ್ತಿಭಾವನೆಯಿಂದ ಪೂಜಿಸುವ ಸಂಪ್ರದಾಯ ಅನುಸರಿಸುತ್ತಾರೆ. ಅನುಕೂಲವಾದರೆ ಈ ಜಾತ್ರೆಗಳಿಗೆ ಹೋಗಿ ಬರುತ್ತಾರೆ. ಆದರೆ ಜಾತ್ರೆಗೆ ಹೋಗಲೇಬೇಕೆಂಬ ಸಂಪ್ರದಾಯವನ್ನು ಇಟ್ಟು ಕೊಂಡರುವುದಿಲ್ಲ. ತಮ್ಮ ಅನುಕೂಲತೆಯನ್ನು ನೋಡಿ ಹೋಗಿ ಬರುವ ಪದ್ಧತಿ ಅನುಸರಿಸುತ್ತಾರೆ.

### ಮುಸ್ಲಿಂ ದೇವರುಗಳು

ಸದಾ ಶಾಂತಿ ಸೌಹಾರ್ದತೆಯನ್ನು ಬಯಸುವ ಬೈಲುಪತ್ತಾರರ ಸಮುದಾಯದವರು ಸರ್ವಧರ್ಮಗಳಲ್ಲಿ ಸಮಾನ ಭಾವನೆಯನ್ನು ಹೊಂದಿರುವ ಇವರು ಮುಸ್ಲಿಂ ದೇವರುಗಳಿಗೂ ಕೂಡ ತುಂಬಾ ಭಕ್ತಿ ಭಾವನೆಯಿಂದ ಹರಕೆಗಳನ್ನು ಹೋತ್ತು ಹರಕೆ ತಿರಿಸುವ ಸಂಪ್ರದಾಯ ಅನುಸರಿಸುತ್ತಾ ಬಂದಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ ಗುಲ್ಬರ್ಗಾ ಜಿಲ್ಲೆಯಲ್ಲಿನ ಬೈಲುಪತ್ತಾರರು ಬೀದರ ಜಿಲ್ಲೆಯ ಹುಮನಾಬಾದ್ ಹತ್ತಿರವಿರುವ ಗೊಡವಾಡಿ ಇಸ್ಮಾಯಿಲ್ ಖಾದ್ರಿ, ಮಂಗಾಲಿಯ ಹುಸೇನಭಾಷಾ, ಹಕ್ಕಿಕುಣಿಯ ಬಂದಿಗಿ ಸಾಹೆಬ ದರಗಾ, ಬಳಚಕ್ರದ ಖಾಸಿಂಸಾಬಾ ದರಗಾ, ಮೌಲಾಲಿ, ದಾವಲ್‌ಮಲ್ಲಿಕ್ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಗೊಡವಾಡಿಯ ಇಸ್ಮಾಯಿಲ್‌ಖಾದ್ರಿ ದೇವರಿಗೆ ಹರಕೆ ಹೊತ್ತವರು ಜೋಡು ಆಡಿನ ಬ್ಯಾಟಿ ಮಾಡಲೇಬೇಕೆಂಬ ಸಂಪ್ರದಾಯಿರುವುದರಿಂದ ಅಲ್ಲಿಗೆ ಹೋಗಿ ಬಹಳ ಭಕ್ತಿ ಭಾವನೆಯಿಂದ ಪೂಜೆಸಲ್ಲಿಸಿ ಜೋಡು ಬ್ಯಾಟಿಯ ಹರಕೆಯನ್ನು ತಿರಿಸಿದ ಮೇಲೆ ತಮ್ಮ ಸ್ವಂತ ಊರಿಗೆ ಬಂದ ಮೇಲೆ ಒಂದು ವಾರ ಕಳೆಯದೊರಳಗೆ ತಮ್ಮ ಮನೆಯಲ್ಲಿ ಪಕೀರರನ್ನು ಊಟ ಮಾಡಿಸುವ ಸಂಪ್ರದಾಯದ ಅನುಸರಿಸುತ್ತಾರೆ ಎಂಬುದು ಸಂಶೋಧನೆಯ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಅಲ್ಲದೆ ಇವರ ದೇವರುಗಳಿಗೂ ಕೂಡ ತಮ್ಮ ಭಕ್ತಿಭಾವನೆಗೆ ಸಿಗುವಂತಹ ಹರಕೆಯನ್ನು ಹೊತ್ತು ಹರಕೆ ತಿರಿಸುವ ಸಂಪ್ರದಾಯ ಅನುಸರಿಸುತ್ತಾರೆ.

### ೩. ಕುಲಪಂಚಾಯಿತ್ತಿ

ಬುಡಕಟ್ಟು ಸಮುದಾಯಗಳಲ್ಲಿ ತಮ್ಮದೇಯಾದಂತಹ ವ್ಯವಸ್ಥಿತವಾದ ನ್ಯಾಯ ಪಂಚಾಯ್ತಿಗಳು

ಜಾರಿಯಲ್ಲಿರುತ್ತವೆ. ನ್ಯಾಯದ ಮುಂದೆ ಎಲ್ಲರು ಸಮಾನರು ಎಂಬ ಪರಿಕಲ್ಪನೆ, ಬುಡಕಟ್ಟು ಸಮುದಾಯಗಳಲ್ಲಿ ಕಂಡು ಬರುತ್ತದೆ ಮುಖಂಡನಾದವನೆ ತಪ್ಪು ಮಾಡಿದಾಗ ಹತ್ತು ಮಂದಿಯ ಸಾಮೂಹಿಕ ನಿರ್ಣಯಕ್ಕೆ ಆತ ತಲೆಬಾಗಲೇ ಬೇಕಾಗುತ್ತದೆ. ಹೀಗಾಗಿ ಬುಡಕಟ್ಟು ಸಮುದಾಯಗಳಲ್ಲಿ ಮುಖಂಡನಾದವನು ಸರ್ವಾಧಿಕಾರಿಯಾಗಿ ಮರೆಯಲು ಅವಕಾಶವಿರುವುದಿಲ್ಲ ಮತ್ತು ಆತ ತಮ್ಮ ಸಮುದಾಯದವನೆಯಾಗಿರುವುದುರಿಂದ ಆತನನ್ನು ತಮ್ಮ ಜನಾಂಗದ ಹಿತ ಕಾಪಾಡಿಕೊಂಡು ಹೋಗುತ್ತಾನೆ. ಅಲ್ಲದೆ ವ್ಯಾಜ್ಯವನ್ನು ಬಗ್ಗೆ ಹರಿಸುವಾಗ ಮುಖಂಡನಾದ ವ್ಯಕ್ತಿ ಸಾಮೂಹಿಕ ಚರ್ಚೆಯೊಂದಿಗೆ ನಿರ್ಣಯಗಳನ್ನು ಕೈಗೊಳ್ಳುವುದರಿಂದ ನಿಷ್ಪಕ್ಷಪಾತವಾದ ನಿರ್ಣಯಗಳು ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುತ್ತವೆ.

ಬುಡಕಟ್ಟು ಸಮುದಾಯದ ಪರಿಕಲ್ಪನೆಯಲ್ಲಿರುವ ಬೈಲುಪತ್ತಾರರಲ್ಲಿಯೂ ಕೂಡ ತಮ್ಮದೇಯಾದಂತಹ ನ್ಯಾಯ ಪಂಚಾಯ್ತಿ ವ್ಯವಸ್ಥೆಯನ್ನು ಹೊಂದಿದ್ದಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಇವರು ತಮ್ಮ ಸಮಸ್ಯೆಗಳು ಮತ್ತು ವಿವಾದಗಳನ್ನು ತಮ್ಮದೇ ನ್ಯಾಯ ಪಂಚಾಯ್ತಿಯಲ್ಲಿ ಬಗ್ಗೆ ಹರಿಸಿಕೊಳ್ಳುತ್ತಾರೆ. ಇವರು ನ್ಯಾಯ ತೀರ್ಮಾನ ಮಾಡಲು ತಮ್ಮ ಸಮುದಾಯದಲ್ಲಿನ ಹಿರಿಯ ವ್ಯಕ್ತಿಗೆ ಮುಖ್ಯಸ್ಥನನ್ನಾಗಿ ನಿಯಮಿಸಿರುತ್ತಾರೆ ಸಮುದಾಯದವರು ಈ ವ್ಯಕ್ತಿಗೆ "ಬಂತ್ರೂಗ" ಎಂದು ಕರೆಯುತ್ತಾರೆ.

ಇವರ ನ್ಯಾಯ ಪಂಚಾಯ್ತಿಯ ಸಂದರ್ಭದಲ್ಲಿ ಕನಿಷ್ಠ ಯಾವುದಾದರು ಮೂರು ಬೆಡಗಿನ ಮುಖ್ಯಸ್ಥರಿಗೆ ಕರೆಸಲೇಬೇಕಾಗುತ್ತದೆ. ಮತ್ತು ಈ ಸಂದರ್ಭದಲ್ಲಿ ವೃತ್ತಾಕಾರದಲ್ಲಿ ಸಭೆ ಸೇರಿರುತ್ತಾರೆ. ವೃತ್ತಕಾರದ ಮೊದಲ ಪರಿದಿಯಲ್ಲಿ ಮುಖ್ಯಸ್ಥರೊಂದಿಗೆ ಸಮುದಾಯದವರು ಕುಳಿತುಕೊಂಡಿರುತ್ತಾರೆ. ಎರಡನೆಯ ಪರಿದಿಯಲ್ಲಿ ಮಹಿಳೆಯರು ಕುಳಿತುಕೊಂಡು ಸಾಮೂಹಿಕ ಚರ್ಚೆಯ ಮೂಲಕ ನ್ಯಾಯ ತೀರ್ಮಾನವನ್ನು ಮಾಡುತ್ತಾರೆ. ಸಮುದಾಯದಲ್ಲಿನ ಇಬ್ಬರ ವ್ಯಕ್ತಿಗಳ ನಡುವೆ ಯಾವುದೇ ಸಮಸ್ಯೆ ಬಂದಾಗ ಈ ಇಬ್ಬರು ವ್ಯಕ್ತಿಗಳು ತಮ್ಮ ಸಮಸ್ಯೆಯನ್ನು ಬಂತ್ರೂಗನ (ಮುಖ್ಯಸ್ಥನ) ಮುಂದೆ ಹೇಳುವಾಗ ಪ್ರತ್ಯೇಕವಾಗಿ ಹತ್ತು ಹತ್ತು ರೂಪಾಯಿಗಳನ್ನು ಇಟ್ಟು ಹೇಳುತ್ತಾರೆ.

ಆಗ ಬಂತ್ರೂಗ (ಮುಖ್ಯಸ್ಥನು) ನನ್ನ ಮಾತಿಗೆ ಬೆಲೆಕೊಟ್ಟರೆ ಮಾತ್ರ ಈ ಇಬ್ಬರ ಹಣವನ್ನು ಮುಟ್ಟುತ್ತೆನೆ ಎಂದು ಹೇಳುತ್ತಾನೆ. ಆಗ ಈ ಇಬ್ಬರೂ ವ್ಯಕ್ತಿಗಳು ಒಪ್ಪಿಕೊಂಡ ಮೇಲೆ ಸಮಸ್ಯೆಯು ಅನೇಕ ಚರ್ಚೆಗಳ ನಂತರ ನ್ಯಾಯ ತೀರ್ಮಾನ ಮಾಡಲಾಗುತ್ತದೆ. ನ್ಯಾಯ ತೀರ್ಮಾನವಾದ ಮೇಲೆ ಆ ಇಬ್ಬರ ವ್ಯಕ್ತಿಗಳು ಕೊಟ್ಟಿರುವ ಒಟ್ಟು ರೂಪಾಯಿಗಳಿಂದ ಸಕ್ಕರೆ ತರಿಸಿ ಎಲ್ಲರೂ ತಿನ್ನುತ್ತಾರೆ. ಒಂದು ವೇಳೆ ನ್ಯಾಯ ತೀರ್ಮಾನವಾಗದೆ ಹೋದರೆ ಆ ಇಬ್ಬರ ಹಣವನ್ನು ಅವರವರಿಗೆ ವಾಪಸ್ ಕೊಡಲಾಗುತ್ತದೆ. ನ್ಯಾಯವು ಬಹಳ ಗಂಭಿರ್ಹವಾಗಿದರೆ ತಪ್ಪಿಸ್ತ ವ್ಯಕ್ತಿಗಳು ಸಮುದಾಯದವರಿಗೆ ಆಡಿನ ಬ್ಯಾಟಿಯ ಔತಣ ಕೊಡಿಸಬೇಕಾಗುತ್ತದೆ.

## ೩.೧ ಕುಲಬಹಿಷ್ಕಾರ

ಬೈಲುಪತ್ತಾರ ಸಮುದಾಯದಲ್ಲಿ ಹೆಣ್ಣಾಗಲಿ ಅಥವಾ ಗಂಡಾಗಲಿ ತಪ್ಪುಗಳನ್ನು ಮಾಡಿದ್ದಾಗ ಜಾತಿ ಬಹಿಷ್ಕಾರ ಹಾಕುವ ಪದ್ಧತಿ ಜಾರಿಯಲ್ಲಿದೆ. ಹೀಗಾಗಿ ಸಮುದಾಯದಲ್ಲಿ ತಮ್ಮ ಜವಾಬ್ದಾರಿಗಳನ್ನು ಅರಿತುಕೊಂಡು ಸರಳತೆಯ ಜೀವನ ಮಾಡುವುದು ಕಂಡು ಬರುತ್ತದೆ.

**ಕುಲ ಬಹಿಷ್ಕಾರ ಸಂದರ್ಭಗಳು**

೧. ಬೈಲುಪತ್ತಾರ ಸಮುದಾಯಕ್ಕೆ ಸೇರಿದ ಪುರುಷನು ಅನ್ಯಜಾತಿಯ ಹೆಣ್ಣನ್ನು ಮದುವೆಯಾದಗ ಅಂಥವನ್ನು ಜಾತಿಯಿಂದ ಬಹಿಷ್ಕರಿಸಲಾಗುತ್ತದೆ ಅಲ್ಲದೆ ಅವರ ಕುಟಂಬಕ್ಕೆ ಸೂಕ್ತವಾದ ಅಲ್ಪ ಪ್ರಮಾಣದ ದಂಡ ಹಾಕಲಾಗುತ್ತದೆ. ಒಂದು ವೇಳೆ ಕುಟುಂಬದವರು ದಂಡ ಕಟ್ಟದೆ ಹೋದರೆ ಅವರಿಗೆ ಮದುವೆ ಮತ್ತು ಇತರ ಕಾರ್ಯಕ್ರಮಗಳ ಚಾಜ ಮಾಡಲು ಅವಕಾಶವಿರುವದಿಲ್ಲ ಆದರೆ ಭಾಗಿಗಳಾಗಬಹುದು.

೨. ಸಮುದಾಯದಲ್ಲಿ ಕನ್ಯೆಯಾದವಳು ಬೇರೆ ಜಾತಿಯ ಹುಡಗನನ್ನು ಪ್ರೀತಿಸಿ ಓಡಿಹೋದರೆ ಇಲ್ಲವೆ ಮದುವೆ ಮಾಡಿಕೊಂಡರೆ. ಅವಳನ್ನು ಕುಲದಿಂದ ಬಹಿಷ್ಕಾರಿಸಲಾಗುತ್ತದೆ. ಈ ಸಂದರ್ಭದಲ್ಲಿ ಕನ್ಯೆಯ ಕುಟುಂಬದವರು ಸಮುದಾಯಕ್ಕೆ ಅಲ್ಪ ಪ್ರಮಾಣದ ಸೂಕ್ತವಾದ ದಂಡ ಕಟ್ಟಬೇಕಾಗುತ್ತದೆ. ಮತ್ತು ಈ ಕನ್ಯೆ ಓಡಿಹೋಗಿದಕ್ಕೆ ಇವರು "ಪಿಲೆ ಮಾಹಾಲ್" ಎಂದು ಕರೆಯುತ್ತಾರೆ. ಈ ಕನ್ಯೆಗೆ ಮತ್ತೆ ಸಮುದಾಯದಲ್ಲಿ ಸೇರಿಸಿಕೊಳ್ಳಲು ಅವಕಾಶವಿರುವದಿಲ್ಲ.

೩. ವಿವಾಹಿತ ಮಹಿಳೆ ತನ್ನ ಗಂಡನನ್ನು ಬಿಟ್ಟು ಬೇರೆ ಜಾತಿಯ ವ್ಯಕ್ತಿಯೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡಿದರೆ ಅವಳನ್ನು ಕುಲದಿಂದ ಬಹಿಷ್ಕಾರಿಸಲಾಗುತ್ತದೆ. ಇದಕ್ಕೆ "ಗುಡಿಮಹಾಲ್" ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಆಕೆಯ ಗಂಡನ ಕುಟುಂಬದವರು ಸಮುದಾಯಕ್ಕೆ ಸೂಕ್ತವಾದ ದಂಡ ಕಟ್ಟಬೇಕಾಗುತ್ತದೆ.

೪. ಸಮುದಾಯದಲ್ಲಿನ ಸ್ತ್ರೀಯಾಗಲ್ಲಿ ಇಲ್ಲಿವೇ ಪುರುಷನಾಗಲಿ ತಮ್ಮ ಸಮುದಾಯದ ಸಂಪ್ರದಾಯಗಳು ಪುರಾತನ ಮೌಲ್ಯಗಳು, ರೀತಿ ನೀತಿಗಳನ್ನು ಮುರಿಯುವಂತಹ ಕ್ರಿಯೆಗಳಲ್ಲಿ ತೊಡಗಿದ್ದಾಗ ಇಲ್ಲವೆ ಸಮುದಾಯದಲ್ಲಿನ ಇತರರಿಗೆ ಆ ಘಾತಕವಾದ ನೋವುಂಟು ಮಾಡಿದ್ದಾಗ ಕುಲಬಹಿಷ್ಕಾರದ ಅಸ್ತ್ರವನ್ನು ಅಂತವರ ಮೇಲೆ ಹಾಕಲಾಗುತ್ತದೆ.

## ೩.೨. ಕುಲ ಶುದ್ಧೀಕರಣ

ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಕುಲಬಹಿಷ್ಕಾರದ ಜೊತೆಗೆ, ಕುಲಶುದ್ಧೀಕರಣಕ್ಕೂ ಅನುವು ಮಾಡಿಕೊಟ್ಟಿರುವುದ ಕಂಡುಬರುತ್ತದೆ. ಇಲ್ಲಿ ಬೈಲು ಪತ್ತಾರರ ಸಮುದಾಯದಲ್ಲಿಯೂ ಕೂಡ ಇಂತಹ

ಅನುಕೂಲಗಳಿಟ್ಟುರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಮನುಷ್ಯ ತನ್ನ ದೈನಂದಿನ ಜೀವನದಲ್ಲಿ ತಪ್ಪುಗಳು ಮಾಡುವುದು ಸಹಜ, ಆದರೆ ತಮ್ಮ ಕುಲ ಸಮೂಹಕ್ಕೆ ಇಲ್ಲವೇ ಕುಟುಂಬಕ್ಕೆ ಆಘಾತಕರವಾದ ನೋವುಗಳುಂಟು ಮಾಡಿದ್ದಾಗ ತನ್ನ ಇಡೀ ಸಮುದಾಯವೇ ಅವನನ್ನು ತಾತ್ಸರ್ಯ ಮನೋಭಾವನೆಯಿಂದ ನೋಡುತ್ತದೆ. ಅಲ್ಲದೆ ಆ ವ್ಯಕ್ತಿಗೆ ಸಮುದಾಯದಲ್ಲಿ ಸಾಮಾಜಿಕ ಸ್ಥಾನಮಾನಗಳ ಕೊರತೆ ಅನುಭವಿಸಬೇಕಾಗುತ್ತದೆ. ಕೊನೆಗೆ ಆ ವ್ಯಕ್ತಿಗೆ ತನ್ನ ತಪ್ಪಿನ ಅರಿವುಂಟಾಗಿ ಸಮುದಾಯದ ಬಂದು ಬಾಂದವರಲ್ಲಿ ತನ್ನ ತಪ್ಪು ಒಪ್ಪಿಕೊಳ್ಳಲು ಬೇಡಿಕೊಂಡಾಗ ಮಾನವೀಯ ಮೌಲ್ಯಗಳನ್ನೊಂದಿರುವ ಸಮುದಾಯ ಕುಲಶುದ್ಧೀಕರಣದ ವಿಧಿ ವಿಧಾನಗಳಿಂದ ಮತ್ತೇ ಆ ವ್ಯಕ್ತಿಗೆ ತನ್ನ ಸಮುದಾಯದಲ್ಲಿ ಮೊದಲಿನ ಸ್ಥಾನಮಾನಗಳನ್ನು ನೀಡುತ್ತದೆ. ಇಲ್ಲಿ ಬೈಲುಪತ್ತಾರ ಸಮುದಾಯದಲ್ಲಿಯೂ ಕೂಡ ತಮ್ಮದೆಯಾದ ವಿಧಿವಿಧಾನಗಳಿಂದ ಕುಲಶುದ್ಧೀಕರಣಕ್ಕೆ ಅನುವುಮಾಡಿಕೊಟ್ಟಿದ್ದಾರೆ. ಇವರ ಕುಲ ಶುದ್ಧಿಕರಣ ಸಂದರ್ಭದಲ್ಲಿ ಬಂತ್ರೂಗ (ಮುಖ್ಯಸ್ಥನು) ಬಹಳ ಮುಖ್ಯ ಪಾತ್ರವಹಿಸುತ್ತಾನೆ. ಈತನ್ನು ತಮ್ಮ ಸಮುದಾಯದ ಯಾವುದದರೂ ಕನಿಷ್ಠ ಮೂರು ಬೆಡಗಿನವರ ನಿರ್ಣಯಗಳನ್ನು ಕೇಳಿ ಕೊನೆಗೆ ತೀರ್ಮಾನ ತೆಗೆದುಕೊಂಡು ಕುಲಶುದ್ಧೀಕರಣಕ್ಕೆ ಅನುವುಮಾಡಿ ಕೊಡುತ್ತಾನೆ.

ಈ ಸಂದರ್ಭದಲ್ಲಿ ಯಾವುದಾದರೂ ಒಂದು ಬೆಡಗಿನ ವ್ಯಕ್ತಿ ಸವಟಿನಲ್ಲಿ (ಚಮಚ) ಬೆಂಕಿ ಹಿಡಿದಿರುತ್ತಾನೆ. ಇನ್ನೊಬ್ಬ ಯಾವುದದಾದರೂ ಒಂದು ಬೆಡಗಿನ ವ್ಯಕ್ತಿಯ ಕೈಯಲ್ಲಿ ಬಂಗಾರದ ಅಥವಾ ಬೇವಿನ ಕಡ್ಡಿ ಇರುತ್ತದೆ. ಮತ್ತೊಬ್ಬ ವ್ಯಕ್ತಿ ಅಂದರೆ ಮೂರನೆಯವನ್ನು ಯಾವುದಾದರೂ ಒಂದು ಬೆಡಗಿನವನ ಕೈಯಲ್ಲಿ ಒಂದು ತಂಬಿಗೆಯಲ್ಲಿ ನೀರು ಹಿಡಿದಿರುತ್ತಾನೆ.

ಈ ಮೂರು ಜನ ಬೆಡಗಿನವರು ಸೇರಿ ತಪ್ಪಿಸ್ಥ ವ್ಯಕ್ತಿಯ ಕುಟುಂಬದವರ ನಾಲಿಗೆಯನ್ನು ಬಂಗಾರದ ಅಥವಾ ಬೇವಿನ ಕಡ್ಡಿಯಿಂದ ಸುಟ್ಟು ತಂಬಿಗೆಯಲ್ಲಿ ನೀರುಹಾಕಿ ಮೂರು ಸಲ ಹೀಗೆ ಮಾಡಿ ಕುಲ ಶುದ್ಧೀಕರಣ ಮಾಡುವ ಪದ್ಧತಿ ಕೊನೆಗೊಂಡ ಮೇಲೆ ಆ ಕುಟುಂಬದವರ ಮನೆಯಲ್ಲಿನ ಕೆಲವು ಪಾತ್ರೆಗಳ ಮೇಲೆ ಅರದಿಂದ ಮೂರು ಗೆರೆಗಳನ್ನು ಹಾಕಿ ಗುರುತು ಮಾಡಲಾಗುತ್ತದೆ. ನಂತರ ಆ ಕುಟುಂಬದ ತಪ್ಪಿತಸ್ಥ ವ್ಯಕ್ತಿ ಎಲ್ಲರಂತೆಯೇ ಮೊದಲಿನ ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಳ್ಳುತ್ತಾನೆ.

## ಆಧಾರಗಳು


ಅರ್ಜುನ ಗೊಳಸಂಗಿ., *ದಲಿತರ ಬದುಕು ಮತ್ತು ಸಂಸ್ಕೃತಿ* ಪು.೨೯೬, ಮಾರ್ಚ್ ೨೦೦೦

ಸರಗಣಾಚಾರಿ, ಎಸ್.ಎಸ್., *ಭಾರತೀಯ ಸಮಾಜ ಅಧ್ಯಯನ* (ಬಾಗಲಕೊಟ: ಜಯಶ್ರೀ ಪ್ರಕಾಶನ ೧೯೯೯).

## ವಕ್ತೃಗಳು

| ಹೆಸರು | ಬೆಡಗು | ಊರು | ವಯಸ್ಸು |
|---|---|---|---|
| ಲಚಮಣ್ಣಾ ತಂದೆ ಹುಸೇನಪ್ಪ | ಕಬಸ್ತ್ರೋಡ್ | ಹತ್ತಿಕುಣಿ | ೯೦ |
| ಸುಕುಮನಿ ತಂದೆ ತಿಪ್ಪಣ್ಣ | ಗೌಡ್ಯ | ಶಾಹಾಪುರ್ | ೪೩ |
| ಕೃಷ್ಣಪ್ಪ ತಂದೆ ಜಂಜುರಿ | ಮೂಕಲ್‌ವಾಡ್ | ಶಾಪಾಪುರ್ | ೬೦ |
| ಹುಸೇನಪ್ಪ ತಂದೆ ಭಿಮಪ್ಪ | ಸಪ್ಪೋಡ್ | ಹಾಲಗೇರಿ | ೩೦ |

# ಅಧ್ಯಾಯ ೫

# ಬೈಲುಪತ್ತಾರರ ಭಾಷೆ ಮತ್ತು ಸಾಹಿತ್ಯ

# ೫. ಬೈಲುಪತ್ತಾರರ ಭಾಷೆ ಮತ್ತು ಸಾಹಿತ್ಯ

೧. ಸಮುದಾಯದ ಭಾಷೆ

ಮಾನವನು ಸಂಘಜೀವಿ ಎಂಬುದು ಸರ್ವಸಾಮಾನ್ಯ ಮಾತಾಗಿದೆ. ಸಂಘಜೀವಿಯಾದ ಮಾನವನಿಗೆ ಭಾಷೆ ಸಂಪರ್ಕ ಸಾಧನವಾಗಿದೆ ಕಾರ್ಯನಿರ್ವಹಿಸುತ್ತದೆ. ಸಂಘಜೀವಿಯಾದ ಮಾನವನನ್ನು ಪುರಾತನ ಕಾಲದಲ್ಲಿ ಚಿಕ್ಕಚಿಕ್ಕ ಗಣಗಳಲ್ಲಿ ತಮ್ಮ ಗುಂಪಿನವರೊಂದಿಗೆ ವಾಸಿಸುತ್ತಿದ್ದನು. ಅಲ್ಲದೆ ತಮ್ಮದೆಯಾದಂತಹ ಸಂಜ್ಞೆಗಳ ಮೂಲಕ ಭಾಷೆಯನ್ನು ಕಟ್ಟಿಕೊಂಡು ಮಾತನಾಡುವುದು ಕಲಿತುಕೊಂಡರು. ಸಮಾಜವು ಬೆಳೆದಂತೆ ಗಣಗಳು ಗ್ರಾಮಗಳಾಗಿ ಪರಿವರ್ತನೆ ಹೊಂದಿದಾಗ ಅನೇಕ ಭಾಷೆ ಉಪಭಾಷೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡು ಬರತೊಡಗಿದವು. ನಂತರ ತಮ್ಮದೆಯಾದ ಸ್ವತಂತ್ರ ಭಾಷೆಯಾಗಿಯೂ ಪರಿವರ್ತನೆಗೊಂಡು ಸಮುದಾಯಿಕ ಬದುಕಿನ ರೀತಿ ನೀತಿಗಳನ್ನು ಜೀವನದ ವಿಧಾನಗಳನ್ನು ತಿಳಿಸುವಲ್ಲಿ ಭಾಷೆಯು ಪ್ರಮುಖ ಪಾತ್ರವಹಿಸುತ್ತದೆ.

ಬೈಲುಪತ್ತಾರ ಸಮುದಾಯವು ಕೂಡಾ ತನ್ನ ಅಂತರಾಳದಲ್ಲಿ ತನ್ನದೆಯಾದಂತಹ ಮಾತೃ ಭಾಷೆಯನ್ನು ಹೊಂದಿದ್ದು ತಾವು ಮಾತನಾಡುವ ಭಾಷೆಗೆ "ಜಗನ್ನಾಥ" ಭಾಷೆ ಎಂದು ಹೇಳುತ್ತಾರೆ. ಅಲ್ಲದೆ ಕೆ.ಎನ್. ಸಿಂಗ್‌ರವರು "They Speak a dialeet of the Indo-Aryan languge oriya at home"[1] L.K.A. ಐಯರ್ The Bailu Akkasales who work out side villages speak a languaga know as Jaganatha Bhashe"[2] ಎಂದು ಹೇಳಿದ್ದಾರೆ. ಇವರು ಹೇಳುವ ಮಾಹಿತಿಗಳ ಹಿನ್ನಲೆಯಲ್ಲಿ ಮತ್ತು ಸ್ವತಃ ಸಮುದಾಯದವರು ಹೇಳುವ ಮಾಹಿತಿಗಳ ಹಿನ್ನೆಲೆಯಲ್ಲಿ ಈ ಭಾಷೆಯ ಲಿಪಿ ಇಲ್ಲದ ಓರಿಸ್ಸಾದ ಒಂದು ಉಪ ಭಾಷೆಯಾಗಿದೆ ಎಂಬುದು ಗೋಚರಿಸುತ್ತದೆ.

ಅನೇಕ ಆದಿವಾಸಿ ಸಮುದಾಯಗಳು ತಮ್ಮದೆಯಾದಂತಹ 'ಲಿಪಿ' ಇಲ್ಲದ ಭಾಷೆಗಳನ್ನು ಹೊಂದಿರುತ್ತವೆ. ಇಲ್ಲಿ ಬೈಲುಪತ್ತಾರ ಸಮುದಾಯವು ಕೂಡಾ ತಮ್ಮದೆಯಾದಂತಹ 'ಲಿಪಿ' ಇಲ್ಲದ ಸ್ವತಂತ್ರ ಭಾಷೆ ಹೊಂದಿದ್ದು, ಇದು ಆದಿವಾಸಿ ಸಮುದಾಯವು ಎನಿಸಿಕೊಳ್ಳುತ್ತದೆ.

**ವಿವಿಧ ವಲಯಗಳಲ್ಲಿ ಭಾಷೆ ಬಳಕೆ**

ಬೈಲು ಪತ್ತಾರರು ಅಲೆಮಾರಿ ಪತ್ತಾರಿಕೆ ವೃತ್ತಿ ಹೊಂದಿರುವುದರಿಂದ, ತಮ್ಮ ಭಾಷೆಯ ಜೊತೆಗೆ




ವಿವಿಧ ವಲಯಗಳಲ್ಲಿರುವ ಪ್ರಾದೇಶಿಕ ಭಾಷೆಗಳನ್ನು ಕೂಡಾ ಮಾತನಾಡುವುದು ಮೈಗೂಡಿಸಿಕೊಂಡಿದ್ದಾರೆ.

೧. ಬೈಲು ಪತ್ತಾರರು ತಮ್ಮ ಕುಟುಂಬಗಳಲ್ಲಿ ತಮ್ಮದೇ ಭಾಷೆಯಲ್ಲಿ ಮಾತನಾಡುತ್ತಾರೆ. ಹುಟ್ಟಿದ ಮಗುವಿಗೆ ಭಾಷೆಯ ಕಲಿಕೆಯ ಹಂತದಲ್ಲಿ ತಮ್ಮ ಭಾಷೆಯನ್ನು ಕಲಿಸಿ ಕೊಡುತ್ತಾರೆ. ಇವರ ಕುಟುಂಬಗಳಲ್ಲಿನ ಸಂಪ್ರದಾಯಿಕ ಕಾರ್ಯಕ್ರಮಗಳಲ್ಲಿ, ವಿವಾಹ ಸಂಪ್ರದಾಯಗಳಲ್ಲಿ, ಕುಲ ಪಂಚಾಯತ್‌ಗಳು ನಡೆದಾಗ ತಮ್ಮ ಭಾಷೆ ಬಳಸುತ್ತಾರೆ. 

೨. ಬೈಲು ಪತ್ತಾರರು ತಾವು ನೆಲೆಸಿರುವ ಪ್ರದೇಶಗಳಲ್ಲಿನ ಪ್ರಾದೇಸಿಕ ಭಾಷೆಗಳಲ್ಲಿ ಕೂಡಾ ಮಾತನಾಡುತ್ತಾರೆ. ಅಂದರೆ, ಆಂಧ್ರ ಪ್ರದೇಶದ ಗಡಿ ಭಾಗಗಳಲ್ಲಿರುವವರು ತೆಲುಗು, ಮಹಾರಾಷ್ಟ್ರದ ಗಡಿಭಾಗಗಳಲ್ಲಿರುವವರು ಮರಾಠಿ ಭಾಷೆಗಳಲ್ಲಿ ಮಾತನಾಡುತ್ತಾರೆ. ಇವರು ಕನ್ನಡ ಓದುವುದು, ಬರೆಯುವುದರೊಂದಿಗೆ ಕನ್ನಡ ಶಾಲೆಗಳಲ್ಲಿ ಅಭ್ಯಾಸ ಮಾಡುವವರ ಸಂಖ್ಯೆಯೂ ಕಂಡುಬರುತ್ತದೆ.

೩. ಬೈಲು ಪತ್ತಾರರು ಅಲೆಮಾರಿ ಪತ್ತಾರಿಕೆ ವೃತ್ತಿ ಹೊಂದಿರುವುದರಿಂದ, ಇವರು ವ್ಯವಹಾರಿಕವಾಗಿ ಜನರು ಬಳಸುವಂತಹ ವಿವಿಧ ಭಾಷೆಗಳಲ್ಲಿ ಮಾತನಾಡುತ್ತಾರೆ. ಹಿಂದಿ ಭಾಷೆಯು ವ್ಯವಹಾರಿಕವಾಗಿ ವಲಯಗಳಲ್ಲಿ ಹೆಚ್ಚಾಗಿ ಬಳಕೆಯಾಗುವುದರಿಂದ, ಇವರು ಹಿಂದಿ ಭಾಷೆಯಲ್ಲಿಯೂ ಕೂಡ ಮಾತನಾಡುತ್ತಾರೆ. ಆದರೆ ಹೆಂಗಸರು ಬಹುಸಂಖ್ಯಾತರು ಮಾತನಾಡುವ ಭಾಷೆಗಳನ್ನು ಕಲಿತುಕೊಂಡಿರುತ್ತಾರೆ.

**೨. ಸಮುದಾಯದ ಭಾಷೆಯ ಅನುವಾದ**

ಬೈಲುಪತ್ತಾರರು ಕರ್ನಾಟಕದಲ್ಲಿ ಬಹುಹಿಂದಿನಿಂದಲೂ ಅಲೆಮಾರಿಗಳಾಗಿ ಜೀವನ ನಡೆಸುತ್ತಾ ನೆಲೆನಿಂತ್ತಿರುವುದರಿಂದ, ತಮ್ಮ ಭಾಷೆಯ ಜೊತೆಗೆ ಕನ್ನಡ ಭಾಷೆಯನ್ನು ಕೂಡಾ ಮನೆ ಮಾತಾಗಿಸಿ ಕೊಂಡಿದ್ದಾರೆ. ಇವರು ಮಾತನಾಡುವಾಗ ಅರಿತೋ ಅರಿಯದೆಯೋ ಕೆಲವು ಸಲ ಕನ್ನಡ ಪದಗಳನ್ನು ಮಧ್ಯ ಬಳಸುತ್ತಾರೆ. ಇವರು ಕನ್ನಡ ಓದುವುದು, ಬರೆಯುವುದು ಅಲ್ಪಸ್ವಲ್ಪ ಅರಿತ್ತುಕೊಂಡಿದ್ದಾರೆ. ಅಲ್ಲದೆ ಕನ್ನಡ ಶಾಲೆಗಳಲ್ಲಿ ಓದುತ್ತಿರುವದು ಕಂಡು ಬರುತ್ತದೆ. ಇವರ ಭಾಷೆಯ ಕೆಲವು ಪದಗಳನ್ನು ಬರೆದು ಅವುಗಳಿಗೆ, ಕನ್ನಡದಲ್ಲಿ ಅನುವಾದ ಕೊಡಲಾಗಿದೆ. ಅಲ್ಲದೆ ವ್ಯಾಖ್ಯಾಗಳು, ಲಿಂಗವಿಚಾರ, ಕಾಲಗಳು, ಸಂಭಾಷಣೆಯ ಕೆಲವು ವ್ಯಾಖ್ಯಾಗಳನ್ನು ಕೂಡಾ ಬಳಸಿಕೊಂಡು ಅನುವಾದಿಸಲಾಗಿದೆ.

**೧. ಅಲಂಕಾರಗಳ ಹೆಸರು**

೧. ಅರಿಸಿನ-ಹೋಲ್ದ್
೨. ಕರೆಮಣಿ-ಕಲ್ಲುಕಂಟಿ
೩. ಕುಂಕುಮ-ಕುಕುಮೋ
೪. ಗೆಜ್ಜೆ-ಘುಂಗುರ
೫. ಬೈತಲ್-ಪ್ಯಾಂಟಿಗೆ
೬. ಹಣಗೆ-ಪನಿಯಾ
೭. ಉಂಗುರ-ಮುದಿ
೮. ಕಾಡಿಗೆ-ಕಾಂಜಡ್
೯. ಗಂಧ-ಚಂದನ್
೧೦. ಬಳಿ-ಕಾಂಚ್
೧೧. ಹೂವು-ಫೂಲ್

೨. ಕಾಯಿಪಲ್ಲೆ ಹೆಸರು

೧. ಬೆಂಡೆಕಾಯಿ - ಬೆಂಡಿಕಾಯೊ

೨. ಶಾವಿಪಲ್ಲೆ - ಶಾವಿಸಾಗ್

೩. ಹಾಗಲಕಾಯಿ - ಹಾಗಲಕಾಯಾ

೪. ಮೆಂತೇಪಲ್ಲೆ - ಮೆಂದಿಸಾಗ್

೫. ಕುಂಬಳಕಾಯಿ - ಕುಂಬಳಕಾಯೋ

೬. ಬದನೆಕಾಯಿ - ಬೆಂಗ್‌ನ್

೭. ಬೆಳ್ಳೊಳ್ಳಿ - ರೋಸನ್

೮. ಉಳ್ಳಾಗಡ್ಡಿ - ಗಡ್ಡಾ

೯. ಮೆಣಸಿನಕಾಯಿ - ಗ್ವಾಮಾರ್ಚೀ

೨. ಹಣ್ಣುಗಳ ಹೆಸರು

೧. ಕಲ್ಲಂಗಡಿ - ಕಲ್ಲಂಗಡಿಪಂಡ್

೨. ದಾಳಿಂಬರ - ಅನಾರ್

೩. ಜಾಮ್ - ಜಂಪಲ್‌ಪಂಡ್

೪. ಭಾರಿಹಣ್ಣು - ಬೊರಿಪಂಡ್

೫. ಅತ್ತಿಹಣ್ಣು - ಪತ್ತಿಪಂಡ್

೬. ತೆಂಗಿನಕಾಯಿ - ನೊಡಿಯಲ್

೭. ನೀಲಹಣ್ಣು - ನೀಲಪಂಡ್

೮. ಮಾವಿನಹಣ್ಣು - ಆಮ್‌ಪಂಡ್

೯. ಬಾಳೆಹಣ್ಣು - ಬಾಳೇಪಂಡ್

೧೦. ಲಿಂಬಿಹಣ್ಣು - ಲೆಂಬೋಪಂಡ್

೧೧. ಹುಣಸಿಹಣ್ಣು - ತೊಂತ್ತಲ್

೧೨. ಅಡಿಕೆ - ಗುಂವಾ

೪. ಉದ್ಯೋಗದ ಹೆಸರು

೧. ಅಗಸ - ದೋಭಾ

೨. ಕಟಗ - ಕಟಗಿ

೩. ಕುಂಬಾರ್ - ಕುಂಮೋರ್

೪. ಬಡಿಗಾ - ಕಾಟಚಕ್ಕಾ

೫. ಮೇದಾರ - ಬರುಡ್

೬. ಸಿಂಪಿಗ - ದರ್ಜಿ

೭. ಅಕ್ಕಸಾಲಿಗಾ - ಬುನಿಯ್ಯಾರ್

೮. ಉಪ್ಪಾರ - ಉಪ್ಪಾರ್

೯. ಕಂಚಗಾರ - ಕಂಚಗಾರ

೧೦. ಕಮ್ಮಾರ್ - ಲೋವಾಪಿತೆ

೧೧. ಕೂಲಿಕಾರ - ಗೋಡುಮೂಲ

೧೨. ಬಳಿಗಾರ - ಕಚಿರತೇ

೧೩. ಮೋಸಗಾರ - ಗೆಡೋ

೧೪. ಈಡಿಗಾ - ಮಾದಂವಾ

೧೫. ಹೂಗಾರ - ಫುಲಾರಿ

೫. ರೋಗದ ಹೆಸರುಗಳು

೧. ಕಜ್ಜಿ - ಕೌಂಸ್

೨. ಕೆಮ್ಮು - ಕೌಂಸ್

೩. ಜಂತು - ಕೇಂಚವಾ

೪. ಪಿತ್ತಾ - ಪಿತ್ತಮ್ಮ

೫. ಬೇವರು - ಗಮಾನ್ (ಪಾನಿಸಡಿಸೆ)

೬. ಕಣ್ಣುಬೇನೆ - ಚೂಂಕುದುಖೋ

೭. ಜ್ವರ - ಜ್ವಾರ

೮. ನೆಗಡಿ - ಪಡಿಸೇಮ್

೯. ಬಿಕ್ಕು - ಎಕ್ಕುಳ್

೧೦.ಮೂಗ - ಮೂಗೋ

೧೧. ಹಚ್ಚೆ - ಬೈಪೋ

೧೨. ಹುಣ್ಣು - ಗಾಹ

೬. ವಾರಗಳ ಹೆಸರು

ಐತ್ತೋರ್, ಸೋಂಬಾರ್, ಮಂಗಲೋರ್, ಭುದುರೋ, ಬೇಸ್ತೋರ್, ಶುಕ್ರೋರ್, ಶನಿವೋರ್.

೭. ಸೃಷ್ಟಿ ಹೆಸರು

೧. ಆಕಾಶ - ಮೊಡಮ್

೨. ಕತ್ತಲು - ಅಂದಾರ್

೩. ಚಳಿ - ಸೀತ್

೪. ಜೀವ - ಪರಾನ್

೫. ನೀರು - ಪಾನಿ

೬. ಬೆಳಕು - ಉಜಲ್

೭. ಬೆಂಕಿ - ಅಗ್ನೂನ್

೮. ಮಳೆ - ಪಾನಿ

೯. ಚಂದ್ರ - ಚಂದ್ರಮ

೧೦. ಜಗತ್ತು - ದುನಿಯಾ

೧೧. ನಕ್ಷತ್ರ - ಚುಕ್ಕೋ

೧೨. ಬಿಸಿಲು - ಖರಾ

೧೩. ಮನುಷ್ಯ - ಮನಿಮ್

೧೪. ಮಿಂಚು - ಮಿಂಚು

೧೫. ರಾತ್ರಿ - ಅಂಗಾರ್

೧೬. ಹಗಲು - ಉಜಲ್

೧೭. ಸೂರ್ಯ - ಸೂರ್ಯ

೧೮. ಹುಟ್ಟು - ಜ್ವರಂಮುಬೇರ್

## ೮. ಅವಯವಗಳ ಹೆಸರು

೧. ಅಂಗೈ - ತಲಕೋ

೨. ಎದೆ - ಬುಕ್

೩. ಕಣ್ಣು - ಚೊಂಕ್

೪. ಕಾಲು - ಗೋಡಾ

೫. ಕೈ - ಹಾತ್

೬. ಕೋಡು - ಸಿಂಗ್

೭. ಗಡ್ಡಾ - ದಡಿ

೮. ತುಟಿ - ಹೋಟ್

೯. ದವಡಿ - ದವಡೋ

೧೦. ಹಲ್ಲು - ದಾಂತ್

೧೧. ಮಿದುಳು - ಗೀದಿ

೧೨. ಮೂತ್ರ - ಮುತನಾ

೧೩. ರಕ್ತ - ರೊಗತ್

೧೪. ಹೊಟ್ಟೆ - ಪೇಟ್

೧೫. ಎಲುಬು - ಹಡಾ

೧೬. ಕಿವಿ - ಕಾನ್

೧೭. ಕೂದಲು - ಚೂಲ

೧೮. ಗಂಟಲು - ಗಂಟಲಾ

೧೯.ಗಲ್ಲ - ಗಾಲ್

೨೦. ತಲೆ - ಮುಂಡ

೨೧. ತೊಗಲು - ಚಾಲ್

೨೨. ಬೆನ್ನು - ಫೀಂಟ್

೨೩. ಮಿಸಿ - ನೀಸ್

೨೪. ಮೂಗು - ನಾಕ್

೨೫. ಮೊಲೆ - ದುದ್ದ್

೨೬. ಹಣೆ - ಕಪಾಲ್

೯. ಕಾಳಿನ ಹೆಸರು

೧. ಅಕ್ಕಿ - ಚವಲ್

೨. ಎಳ್ಳು - ತೀಲ್

೩. ಜೋಳ - ಜ್ವೋನಾ

೪. ಭತ್ತ - ದಾನ್

೫. ಸಜಿ - ಸಜ್ಜಾ

೬. ರಾಗಿ - ಸಜ್ಜಾ

೭. ಉದ್ದು - ಉದ್ದು

೮. ತೊಗರಿ - ಕಂದೂಲ

೯. ಬೇಳೆ - ಟನಾ

೧೦. ಗೋದಿ - ಗೋದಿ

೧೦. ಊಟದ ಸಾಮಾನು

೧. ಅನ್ನ - ಭಾತ್

೨. ಉಪ್ಪು - ನೊನ್

೩. ತುಪ್ಪ - ಗೀವೊ

೪. ರೊಟ್ಟಿ - ರೋಟಿ

೫. ಸಾರ - ಜೋಲ್

೬. ಹೋಳಿಗಿ - ಪಿಟಿಯೊ

೭. ಪಲ್ಲೆ - ಸಾಗ್

೮. ಹಾಲು - ದ್ದೂದ್

೧೧. ಪಾತ್ರೆಗಳ ಹೆಸರು

೧. ಕೊಡ - ಬಿಂದಿಗೆ

೨. ಪಾತ್ರೆ -ಕಂಚಮ

೩. ಸವಟು - ಡೊಂವಾ

೪. ತಂಬಿಗೆ - ಚಂಬ್

೫. ಗಡಿಗೆ - ಹಂಡಿ

೬. ಬಟ್ಟೆ - ಕಾಟೋ

೧೨. ಮನೆಯೊಳಗಿನ ವಸ್ತುಗಳ ಹೆಸರು

೧. ಅಡಿಗೆ - ರಂದಾ

೨. ಊಟ - ಕೈಬೇರ್

೩. ಒರಳು - ರ್‍ಯಾಕಲ್

೪. ಕಸ್ - ಕಚಡಾ

೫. ಬೂದಿ - ಡಾರ್

೬. ಕಟ್ಟಿಗೆ - ಕೌಟ್

೭. ಊದುಕೊಳವೆ - ನೊಲ್ಲಿ

೮. ದೀಪ - ದೀಪ್

೯. ಬುಟ್ಟಿ - ಗಂಪಾ

೧೦. ಹೊರಸು - ಮಂಚಾ

೧೧. ಅಂಗಳ - ಅಂಗಳಂ

೧೨. ಕಂಬ - ಕಂಬ

೧೩. ಚಿಲಕ - ಚಿಲುಕಂ

೧೪. ಬಚ್ಚಲು - ಬಚಲ್

೧೫. ರೊಟ್ಟಿಹಂಚು - ಕಪದಾರಾ

೧೬. ತೊಟ್ಟಿಲು - ದುಲ್ಲಿ

೧೭. ಹೊಸ್ತಲ - ದ್ವಾರ

೧೮. ಬೀಸುಕಲ್ಲು - ಬಿಸ್‌ರಾಯ್

೧೩. ಗಿಡದ ಹೆಸರು

೧. ತೆಂಗಿನಮರ - ನೋಡಿಯಾಲಗೆಚ್ಚು

೨. ಬೇವಿನಮರ - ಲೀಮ್‌ಗೆಚ್ಚು

೩. ಹುಣುಸೇಮರ - ತೊಂತ್ತಲ್‌ಗೆಚ್ಚು

೪. ಜಾಲಿಮರ - ಜಾಲಿಗೆಚ್ಚು

೫. ಮುಳ್ಳು - ಕಂಟಾ

೧೪. ದಾತುಗಳ ಹೆಸರು

೧. ಬಂಗಾರ - ಕುಬುನ್ನೋ

೨. ಕಬ್ಬಿಣ - ಲುವಾ

೩. ವಜ್ರ - ವಜ್ರ

೪. ಉಕ್ಕು - ರೊಕ್

೧೫. ಬಣ್ಣಗಳ ಹೆಸರು

೧. ಕರಿ - ಕಲ್ಲೋ

೨. ಬಿಳಿ - ದೋಬಲಾ

೩. ಕೆಂಪು - ರಂಗಡಾ

೪. ಹಸಿರು - ಪಚ್ಚೆನ್

೫. ಹಳದಿ - ಹೊಲ್ಡ್

೬. ನೀಲಿ - ನೀಲಿ

೧೬. ಕಾಲದ ಹೆಸರು

೧. ಚಳಿಗಾಲ - ಸೀತ್‌ಗಾಲ್

೨. ಬೇಸಿಗೆಕಾಲ - ಗರಟಾಗಾಲ್

೩. ಮಳೆಗಾಲ - ಪಾನಿಕಾಲ್

೪. ಮುಂಜಾನೆ - ಸಕ್ಕಾಲೆ

೫. ಮಧ್ಯಾಹ್ನ - ದುಂಪರ್

೬. ಸಾಯಂಕಾಲ - ಸಂಜಿಗ್

೭. ರಾತ್ರಿ - ರತ್ತಿಗ್

೮. ವಾರ - ಅಟವಾಡಾ

೯. ತಿಂಗಳು - ಮಸೆಗ್

೧೦. ವರ್ಷ - ಬೊಂಚರ್

೧೭. ಭುವಿಗೆ ಸಂಬಂಧಿಸಿದ ಹೆಸರು

೧. ಉಸುಗು - ಉಸುಗೇ

೨. ಅಡವಿ - ಬೊನ್ನು

೩. ಊರು - ಗಾಂವ್

೪. ಮೈದಾನ - ಮೈದಾನ್

೫. ಮಣ್ಣು - ಮಟ್ಟಿ

೬. ಹೊಲ - ಖೇತ್

೭. ಕಲ್ಲು - ಭಂಡಾ

೧೮. ಗ್ರಾಮ ಪಶುಗಳ ಹೆಸರು

೮. ಆಕಳು - ಆಕಳ್

೯. ಎಮ್ಮೆ - ಭೋಯಿಸ್

೧೦. ಆಡು - ಚೆಲ್ಲಿ

೧೧. ಕತ್ತೆ - ಗೊಡು

೧೨. ಎತ್ತು - ಗೈಯಿ

೧೩. ಇಲಿ - ಮೂಸೋ

೧೪. ಕುದುರೆ - ಗೊಡಾ

೧೫. ಬೆಕ್ಕು - ಬಿಲ್ಲೈ

೧೬. ನಾಯಿ - ಕುಗೊರ್

೧೭. ಆನೆ - ಹೊತ್ತು

೧೮. ಒಂಟೆ - ಹೊಂಟ್

೧೯. ಹಾವು - ಸಾಂಪ್

೨೦. ನರಿ - ನಕ್ಕಾ

೨೧. ಕೋತಿ - ಮಕಡ್

೨೨. ಹುಲಿ - ಭಾಗ್

೨೩. ಹಂದಿ - ಗೆಂಟಿ

೨೪. ಕಾಗೆ - ಕುಂವಾ

೨೫. ಕೋಳಿ - ಕುಡೊ

೨೬. ಗಿಳಿ - ಚಿಲಿಕೆ

೨೭. ಗುಬ್ಬಿ - ಚೊಡ್ಕೆಯ್

೨೮. ಗೂಬೆ - ಗುಬಡ್

೨೯. ನವಿಲ್ - ಮೊಹೆರ್

೩೦. ಬಾತುಕೋಳಿ - ಬದಕ್

೧೯. ಆಪ್ತರ ಹೆಸರು

೧. ಅಕ್ಕ - ಅಕ್ಕ

೨. ಅತ್ತೆ - ಅತ್ತಾ

೩. ಅಳಿಯ - ಜಮ್ಮೆ

೪. ತಮ್ಮ - ಭಾಯ್

೫. ಬೀಗಾ - ಚುಟುಂಮ್

೬. ಮಾವಾ - ಮೋಮಾ

೭. ಮೈದುನಾ - ದೆವರ್

೮. ಹೆಂಡತಿ - ಮೈಪೋ

೯. ಸೊಸೆ - ಬಹು

೧೦. ಅಜ್ಜ - ದದಾ

೧೧. ಅಜ್ಜಿ - ದಿದಿ

೧೨. ಅಣ್ಣ - ಅನ್ನ

೧೩. ತಂದೆ - ಬೋವಾ

೧೪. ತಾಯಿ - ಮಾ

೧೫. ತಂಗಿ - ಬೈನ್

೧೭. ಅತ್ತಿಗೆ - ಭೌವ್

೧೬. ಮಗ - ಫೋ

೨೦. ಅಂಕಿ ಸಂಖ್ಯೆಗಳು

೧ ಒಂದು - ಗೋಟಾ

೨ ಎರಡು - ದುಯ್

೩ ಮೂರು - ತೀನ್

೪ ನಾಲ್ಕು - ಚಾರ್

೫ ಐದು - ಪಾಂಚ್

೬ ಆರು - ಚ್ವಾಹ್

೭ ಏಳು - ಸಾತ್

೮ ಎಂಟು - ಆಟ್

೯ ಒಂಬತ್ತು - ನ್ಯೋವಾ

೧೦ ಹತ್ತು - ದ್ವಸ್

೨೦ ಇಪ್ಪತ್ತು - ಕೂಡ್‌ವಕ್

೩೦ ಮೂವತ್ತು - ತೀಸ್

೪೦ ನಲವತ್ತು - ದುಖಡ್

೫೦ ಐವತ್ತು - ತಿಂಟಂಕಾ

೬೦ ಅರವತ್ತು - ಸಾಟೀ

೭೦ ಎಪ್ಪತ್ತು - ಸತ್ರೀ

೮೦ ಎಂಬತ್ತು - ಐಂಸೀ

೯೦ ತೊಂಬತ್ತು - ನವದ್

೧೦೦ ನೂರು - ನೂರಗ್

ಹತ್ತುಸಾವಿರ - ದಸ್‌ಹಜಾರ್

ಒಂದು ಲಕ್ಷ - ಏಕ್‌ಲಾಕ್

ಒಂದುಕೋಟಿ - ಏಕ್‌ಕೋಟಿ

| | | |
|---|---|---|
| ರೂಪಾಯಿ | - | ಕಟಗೋ |
| ನಾಣ್ಯ | - | ಕೂಡಿ |
| ೨೫ಪೈಸೆ | - | ಪಾಳಗ್ |
| ೫೦ಪೈಸೆ | - | ಅದೇಲಿ |
| ೭೫ಪೈಸೆ | - | ಬಾರಾಣ |
| ೧ರೂ | - | ಗೋಟಾ |

ಶಬ್ದ ಸಂಗ್ರಹ

| | | |
|---|---|---|
| ಮೇಲೆ | - | ಉಪರ |
| ಸಾಯು | - | ಮರ್ |
| ಸತ್ಯ | - | ಸತ್ಯ |
| ತಾಪ್ | - | ಹಾರಾಟ್ |
| ಯಾವಾಗ | - | ಕಬ್ |
| ಸಾಕು | - | ಬಸ್ |
| ಮಾಡು | - | ಗೊಡ್ |
| ನೀನು | - | ತೀ |
| ನೀವು | - | ತುಮೇ |
| ನಾವು | - | ಹಮೇ |
| ನಾನು | - | ಮೈ |
| ನಡೆ | - | ಚಲ್ |

ವಾಕ್ಯ ಸಂಗ್ರಹ

| | | |
|---|---|---|
| ೧. ಸಾಕುಮಾಡು | - | ಬಸ್‌ಕರ್ |
| ೨. ಹಗಲು ಬಾ | - | ಬೇಲ್ ಬರೇ |
| ೩. ಹಟಮಾಡಬೇಡ | - | ಹಟ್ಟಂ ಗೋಡ್ತಾನ್ಹಾ |
| ೪. ತುಸುಮಲಗು | - | ಕುನಿಟ ಸೋ |
| ೫. ಸುಮ್ಮನೆ ಇರು | - | ಜಪಿ ರಾ |

೬. ಹಗಲು ಮಲಗಬೇಡ - ಜೇಲ್ ಸತ ನ್ಹಾ

೭. ಎಲ್ಲರೊಂದಿಗೆ ನಡೆ - ಶೀರೇರ್ ಸಂಗ್ಯ ಚ್ಯಲ್

೮. ಜನರು ಹೇಳಿದ್ದು ಕೇಳು - ಪಬಲ್ ಮನ್ ಕಹರ್ ಸುನ್

೯. ಇದನ್ನು ಕುಡಿದು ಬಿಡು - ಯತ್ ಚಿನ್ನೀ ಫ ಚಾಡ್

ವ್ಯಾಕ ಸಂಗ್ರಹ

೧. ನೀನು ನಾಳೆ ತೋಟಕ್ಕೆ ಹೋಗು - ತಿ ಸಕ್ಯಲ್ ಮಳೇಗ್ ಜಾ

೨. ಇಂದು ಅಭ್ಯಾಸ ಮಾಡು - ಶೀ ಹೀಲಿ ಶಿಗ್

೩. ಸತ್ಯ ಮಾತಾಡು - ಸಚೀ ರಾ ಕಹ್ಯಾ

೪. ಕಾಕನನ್ನು ಕರೆ - ಕಾಕ್‌ಗ್ ಹಾಕ್

೫. ಭಲೋ ಕೆಲಸ ಮಾಡು - ಬಲ್ ಕಪಾಡ್ ಗ್ಯಾಡ್

೬. ರಾತ್ರಿ ಲಗೂನ ಮಲಗು - ರಾತ್ ಹೋ ಜಲ್ದಿ ಸೋ

೭. ಅವನು ನಿನ್ನೆ ಹೋದನು - ಹೋ ಕಲ್ ಯಿ ಜ್ಯಲೀ

೮. ದೇವರ ಉಪವಾಸ ಮುಸ್ಸಿಸುತ್ತೇನೆ - ದ್ಯತೆಸ್ಸೀ ಕಹಾ ರಕೀ ಪಿ ಒಪ್ಪಟಿಂ

ವಾಕ್ಯ ಸಂಗ್ರಹ

೧. ಒಳ್ಳೆಯವರ ಸ್ನೇಹ ಮಾಡು - ಬಿಲ್ ಮನ್‌ಖಿರ್ ಜಾತ್ ಬಂದ್

೨. ಸುಮ್ಮನೆ ಹೋಗು - ಜಟೀ ಜಾ

೩. ಹೋಗೋ ಹೋಗ ನಿ ಏನು ಮಾಡುವಿ- ಜಾ ಜಾ ಲೇ ತೀ ಕೀ ಗೊಡವೇ

೪. ನಾನು ಸಹಾಯ ಮಾಡುವೆನು ಮೀ- ತೀಕೇ ಸಹಾಯ್ ಗೊಡಿಚಂ

೫. ಇಲ್ಲಿಂದ ಆ ಊರು ಬಹಳ ದೂರ ಇದೆ - ಈ ನೆಟಿಂ ಹೋ ಗ್ಯಾವ್ ದೂರ್ ರ್ಯೆಸ್

೬. ಸುಮ್ಮನೆ ಬಾ ಒದರ ಬೇಡ - ಜಟೀ ಆಯಾ ಒದರಿತ ನ್ಹಾ

೭. ರಾಮನು ಕೃಷ್ಣನು ಊರಿಂದ ಬಂದರು - ರಾಮ್ ಕೃಷ್ಣ ಗಾಂವ್ ಫ್ಯೆರ್‌ನ್

೮. ನಾನು ಅದೇ ಪುಸ್ತಕವನ್ನು ಓದಿದೆನು - ಮಿ ವ್ಯೆಹಿ ಪುಸ್ತಕ್ ಚಲಿಚಂ

೯. ಮಾತಾಡಲಿಕ್ಕೆ ಬರುವುದಿಲ್ಲ - ರಾ ಕದ್ಯೆ ತೇ ನಾ ಆಸಾಯಾ

೧೦. ಈ ಮಾತು ನನಗೆ ಖಾತ್ರಿ ಅದೆ - ಏ ರಾ ಮಿಗೇ ಕಾತ್ರಿ ರ್ಯೆಸ್

೧೧. ಅವರಿಗೆ ಹಿಂದುಸ್ಥಾನಿ ಚೆನ್ನಾಗಿ ಬರುವುದು - ವಂಗೇ ಹಿಂದುಸ್ತಾನಿ ಬಲ್ ಹಸ್ ಹಿಟ್

## ಲಿಂಗ ವಿಚಾರ

### ಪುಲಿಂಗ

೧. ಗಂಡುಕುದುರೆ - ಹಂಡೇ ಗ್ವೆಡಾ

೨. ಹುಡುಗಾ - ಚಡಾ

೩. ಗಂಡು ಕೋಳಿ - ಒಂಡೀರ್

೪. ಸೇವಕ - ಆಳು

೫. ಯಜಮಾನ - ಪೇದಲ್

### ಸ್ತ್ರೀಲಿಂಗ

೧. ಹೆಣ್ಣುಕುದುರೆ - ಮ್ಯೆಯೋಗ್ವೆಹಾ

೨. ಹುಡುಗಿ - ಚುಂಡಿ

೩. ಹೆಣ್ಣುಕೋಳಿ - ಕುಡ್ಚೋ

೪. ಅಮ್ಮಾ - ಮಾ

### ನಪುಂಸಕಲಿಂಗ

೧. ಭೂಮಿ - ಬಂಹೀ

೨. ಸಮುದ್ರ - ಸಮುದ್ರ

೩. ಚಾಪಿ - ಮಿಸ್‌ನೇ

೪. ಅರಳೇಕಾಯಿ - ಅರಳೇಕಾಯೋ

೫. ಕಟ್ಟಿಗೆ - ಕಾಟ್

೬. ಕೋಣೆ - ಬೋಲಿ

೭. ಕೀಲಿ - ಕೀಲಿ

೮. ರೋಟ್ಟಿ - ರೊಟ್ಟಿ

೯. ತುಪ್ಪ - ಘೀವ್

## ವಚನ ವಿಚಾರ

| ಏಕವಚನ | | ಬಹುವಚನ | |
|---|---|---|---|
| ೧. ಹೆಸರು | ನಾಮ್ | ೧. ಹೆಸರುಗಳು | ನಾಮ್ ಮನೇ |
| ೨. ಪುಸ್ತಕ | ಪುಸ್ತಕ್ | ೨. ಪುಸ್ತಕಗಳು | ಪುಸ್ತಕ್‌ಮನೇ |
| ೩. ಜಮಾ | ಜಮಾ | ೩. ಒಕ್ಕಟ್ಟುಗಲು | ರ‍್ವೊಂಡೀ ಗ್ವಾನಾ |

| | | | |
|---|---|---|---|
| ೪. ಕವಿ | - ಕವಿ | ೪. ಕವಿಗಲು | - ಕವಿಮನೇ |
| ೫. ಗಿಡಗಂಟಿ | - ಕಂಟಾಬಾಡ್ | ೫. ಗಿಡಗಂಟಿಗಳು | - ಕಂಟಾಬಾಡ್ ಮನೇ |
| ೬. ಯಜಮಾನ | - ಪೇದಲ್ | ೬. ಕಲ್ಲುಗಲು | - ಬಂಡಾಮನೇ |
| ೭. ಕಲ್ಲು | - ಬಂಡಾ | ೭. ಯಜಮಾನರು | - ಪೆದ್ದಲ್‌ಮನೇ |

ಕಾಲಗಳು

**ವರ್ತಮಾನ ಕಾಲ**

| ಏಕವಚನ | ಬಹುವಚನ |
|---|---|
| ೧. ನಾನು ಮಾಡುತ್ತೇನೆ - ಮೀ ಗ್ವಬಡಿಚಂ | ೧. ನಾವು ಮಾಡುತ್ತಿದ್ದೇವೆ - ಹಮೋ ಗ್ವೊಡಿಚೀ |
| ೨. ನೀನು ಮಾಡುತ್ತಿದ್ದಿ - ತೀ ಗ್ವೊಡಿ ಚ್ವೋ | ೨. ನೀವು ಮಾಡುತ್ತಿದ್ದೀರಿ - ತುಮ್ ಗ್ವೊಡಿ ಚನ್ |
| ೩. ಅವನು ಮಾಡುತ್ತಿದ್ದಾನೆ - ಹೋ ಗ್ವೊಡಿ ಚೇ | ೩. ಅವರು ಮಾಡುತ್ತಿದ್ದಾರೆ - ವಾಂಯ್ ಗ್ವೊಡಿ ಚನ್ |

**ಭೂತಕಾಲ**

| ಏಕವಚನ | ಬಹುವಚನ |
|---|---|
| ೧. ನಾನು ಮಾಡಿದೆನು - ಮೀ ಗೊಡ್ ಲೀಸ್ | ೧. ನಾವು ಮಾಡಿದೆವು - ಹಮೇ ಗ್ವೊಡ್ಲಂ |
| ೨. ನೀನು ಮಾಡಿದಿ - ತೀ ಗೊಡ್ ಲೋ | ೨. ನೀವು ಮಾಡಿದಿರಿ - ತುಮೇ ಗ್ಲೋಡ್ಲ್‌ನ್ |
| ೩. ಅವನು ಮಾಡಿದನು - ಹೋ ಗ್ವೊಡ್ ತೀ | ೩. ಅವರು ಮಾಡಿದರು - ವಾಂಯ ಗ್ಲೋಡ್ ಲಂತ್ |

**ಭವಿಷ್ಯತ್ಕಾಲ**

| ಏಕವಚನ | ಬಹುವಚನ |
|---|---|
| ೧. ನಾನು ಮಾಡುವೆನು - ಮಿ ಗ್ಲೊಡ್ ಬೇಟೋ | ೧. ನಾವು ಮಾಡುವೆವು - ಹಮೇ ಗ್ವೆಡ್ ಬೇರ್ ಲೋಗ್ |
| ೨. ನಾನು ಮಾಡುವೆ - ತೀ ಗ್ವೊಡ್ ಬೇ | ೨. ನಾವು ಮಾಡುವಿರಿ - ತುಮೇ ಗ್ವೊಡ್ ಬೇನ್ |
| ೩. ಅವನು ಮಾಡುವನು - ವಾಂಯ್ ಗೊಡ ಬೇನ್ | ೩. ಅವರು ಮಾಡುವರು - ವಾಂಯೋ ಗ್ವೊಡಿಚಂತ್ |

## ೩. ಜನಪದ ಸಾಹಿತ್ಯ

ಜನಪದ ಸಾಹಿತ್ಯವು ಬಾಯಿಯಲ್ಲಿಯೇ ಬ್ರಹ್ಮಾಂಡವನ್ನು ತುಂಬಿಕೊಂಡಿರುವ ಅನಕ್ಷರಸ್ಥ ಸಮಾಜದ ಸಾಹಿತ್ಯವಾಗಿದೆ. ತಮ್ಮ ಜೀವನದ ಪಾಡನ್ನೆ ಹಾಡಾಗಿ ನೀಡುವುದರೊಂದಿಗೆ, ತಮ್ಮ ಜೀವನದ ನೋವು ನಲಿವುಗಳುನ್ನು ಸಂಪ್ರದಾಯಗಳು ಹಾಡಿನಲ್ಲಿ ವಿಶ್ಲೇಷಿಸುವ ಸಾಹಿತ್ಯದ ಒಂದು ಪ್ರಕಾರವಾಗಿದೆ.

ಬೈಲು ಪತ್ತಾರರು ತಮ್ಮ ಭಾಷೆಯಲ್ಲಿ ಮತ್ತು ಕನ್ನಡ ಭಾಷೆಗಳಲ್ಲಿ ಹಾಡುಗಳನ್ನು ಹಾಡುತ್ತಾರೆ.

ಇತ್ತೀಚಿನ ದಿನಗಳಲ್ಲಿ ತಮ್ಮ ಭಾಷೆಗಿಂತ ಕನ್ನಡ ಭಾಷೆಯಲ್ಲಿಯೇ ಹೆಚ್ಚಾಗಿ ಹಾಡುವುದು ರೂಢಿಸಿಕೊಂಡಿದ್ದಾರೆ, ಏಕೆಂದರೆ, ಇವರ ಸಾಂಪ್ರದಾಯಿಕ ಕಾರ್ಯಕ್ರಮಗಳಿಗೆ ಎಲ್ಲಾ ಸಮುದಾಯದವರಿಗೆ ಆಮಂತ್ರಿಸುತ್ತಿರುವುದರಿಂದ, ಅವರಿಗೆ ಅರ್ಥವಾಗುವದಿಲ್ಲ ಎಂಬ ಮನೋಭಾವನೆಯಿಂದ ಕನ್ನಡ ಭಾಷೆಯಲ್ಲಿಯೇ ಹಾಡುತ್ತಾರೆ.

ಇವರ ಜೀವನದ ವಿವಿಧ ಘಟ್ಟಗಳಲ್ಲಿ ಅಂದರೆ, ಜನನದಿಂದ ಹಿಡಿದು, ಮರಣದ ವರೆಗೂ ನಡೆಯುವ ಅನೇಕ ಸಂಸ್ಕಾರಗಳಲ್ಲಿ, ಜೀವನದ ಸಂಘರ್ಷಗಳ ಹಿನ್ನೆಲೆಯಲ್ಲಿ, ಸಾಮಾಜಿಕ ಕಟ್ಟು ಪಾಡುಗಳಲ್ಲಿ ಜನಪದ ಗೀತೆಗಳನ್ನು ಹಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ ದೇವರು ದೇವತೆಗಳ ಸ್ತುತಿ ಗೀತೆಗಳನ್ನು, ಮದುವೆ ಮುಂಜಿಗಳಲ್ಲಿ ಮಂಗಲಗೀತೆ ,ಪ್ರಣಯ ಗೀತೆಗಳನ್ನು, ಏಕಾಂಗಿಯಾಗಿ ವೃತ್ತಿ ನಿರತವಾದಾಗ, ಬೀಸುವಾಗ, ಕುಟ್ಟುವಾಗ, ಮಗುವಿನ ತೊಟ್ಟಿಲು, ತೂಗುವಾಗ ಹಾಡುವ ಹಾಡುಗಳು ಅವರ ಕೋಮಲ ಹೃದಯವನ್ನು ಸ್ಪಷ್ಟವಾಗಿ ಬಿಚ್ಚಿ ತೋರಿಸುತ್ತವೆ.

**೩.೧. ಮೋಜಿನ ಹಾಡುಗಳು**

ಬೈಲು ಪತ್ತಾರ ಸಮುದಾಯದವರು ಕೆಲಸದಲ್ಲಿ ತೊಡಗಿದ್ದಾಗ, ಇಲ್ಲವೆ ಸಮುದಾಯದಲ್ಲಿ ಎಲ್ಲರೂ ಕುಳಿತುಕೊಂಡು ಮೋಜಿನ ಮಾತುಗಳನ್ನಾಡುವಾಗ ಅಥವಾ ಸೋದರ ಸೊಸೆಯಂದಿರು ಇವರ ಮನೆಗಳಿಗೆ ಬಂದಾಗ ಅವರಿಗೆ ರೇಗಿಸುವುದರೊಂದಿಗೆ ಮೋಜು ಮಾಡುವ ಹಾಡುಗಳನ್ನು ಆಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಗಂಡನಾದವನು ಹೆಂಡತಿಗೆ ಮೋಜಿಗಾಗಿ ರೇಗಿಸುವ ಹಾಡುಗಳನ್ನು ಹಾಡುತ್ತಿರುತ್ತಾರೆ. ಇಂತಹ ಎರಡು ಗೀತೆಗಳನ್ನು ಅವರ ಭಾಷೆಯಲ್ಲಿ ಬರೆದು ಅವುಗಳ ಭಾವಾರ್ಥ ಹೇಳಲಾಗಿದೆ.

**ಗಂಡ ಹೆಂಡತಿಗೆ ರೇಗಿಸುವ ಹಾಡು**

೧. ಕೋಕನ್ ಜ್ಯೆ ಭೇತಿ ಮ್ಮಾ ಗೋರಿಕಾ
ರಜ ದಿಕ್‌ಲೇ ಬಾರಿ ದೂರ
ಕೋಕನ್ ಜ್ಯೆ ಬೇತಿ ಮ್ಮಾ ಗೋರಿಕಾ
ರಜ ದಿಕ್‌ಲೇ ಬಾರಿ ದೂರ

೨. ಗಾಡಿ ಮೋಟರ್ ಟೇಶನ್ ದಗ್‌ರೇಕು ರ್‍ಯೆಸಾ
ಗಾಡಿ ಮೋಟರ್ ಟೇಶನ್ ದಗ್‌ರೇಕು ರ್‍ಯೆಸಾ
ಕೋಕನ್ ಜ್ಯೆ ಭೇತಿ ಮ್ಮಾ ಗೋರಿಕಾ
ರಜ ದಿಕಲೇ ಬಾರಿದೂರ

೩. ಮ್ಮಾ ಲೋಂಕರ್ ದ್ಯಾನ್ ತಿಕೇ ರ್‍ಯೆಸಾ
ತಾ ಮುಕ್ತಿವು ಜ್ಯೆಮು ಅಸುಮು ಬಲುಬೇಕಾ
ಕೋಕನ್ ಜ್ಯೆ ಭೇತಿ ಮ್ಮಾ ಗೋರಿಕಾ

ರಜ ದಿಕಲೇ ಬಾರಿ ದೂರ

(ಕೃಷ್ಣಪ್ಪಾ ಮೂಕಲ್‌ವಾಡ್, ಶಾಹಾಪೂರ)

**ಭಾವಾರ್ಥ :** ಈ ಹಾಡಿನಲ್ಲಿ ಗಂಡನಾದವನು ಹೆಂಡತಿಗೆ ರೇಗಿಸುವದರೊಂದಿಗೆ ಆಕೆಗೆ ತಮಾಷೆ ಮಾಡುವ ರೀತಿಯಲ್ಲಿ ಯಾವಾಗ ಹೋಗುತ್ತಿದಿ ತವರ ಮನಿಗಾ, ನಿನ್ನ ತವರು ಮನಿ ದೇಶ ಆದ ಬಹಳ ದೂರ ಆದರೆ ನೀ ಹೋಗಲಿಕ್ಕೆ ಗಾಡಿ, ಮೋಟರ್ ಟೇಶನ್‌ಗಳು ಆವ ಬಹಳ ಸಮೀಪ, ಯೋವಾಗ ಹೋಗುತ್ತಿದಿ ತವರು ಮನಿಗಾ, ನಿನಗೆ ನಿನ್ನ ತಂದೆ ತಾಯಿ ಬಂಧುಗಳ ಮೇಲೆ ಬಹಳ ಪ್ರೀತಿ ಇರುವುದರಿಂದ, ನೀ ಹೇಳುತ್ತಿದಿ ಹೋಗಿ ಭರಮ್ಮ ಅಂತ ಬಲು ಜೋರಾಗಿ, ಯೋವಾಗ ಹೋಗುತ್ತಿದಿ ನಿನ್ನ ತವರು ಮನಿಗಿ, ನಿನ್ನ ತವರೂರು ಆದ ಬಹಳ ದೂರ, ಅಂತ ಹೆಂಡತಿಗೆ ಕಾಡಿಸುತ್ತಾ ತಮಾಷೆ ಮಾಡುವ ಅಂಶಗಳು ಈ ಹಾಡಿನಲ್ಲಿರುತ್ತವೆ.

**ತುಂಟ ಹುಡುಗಿಗೆ ರೇಗಿಸುವ ಹಾಡು**

೧. ಅಲೀಯಾ ಬಾದಾ ಕೋಕ್ ದೊಡ್ಡಿ ಬಿಂತ್ತುರ ಬಂತ್ತು
ಗೊರಮನಿ ಅಲೀಯಾಬಾದಾ ಕೋಕ ದೊಡ್ಡಿ ಬಿಂತ್ತುರ
ಬಂತ್ತು ಗೊರಮನಿ

೨. ನಗತು ಲೀಲಾ, ನಗತುಲ್ಢೀ ಗರಾಗರಾ
ಚ್ವೆಂಕಾ ಬುಲ್ ತಾ ನಾ ಲಚ್ಚುಂಡಿ
ನಗತು ಲೀಲಾ ನಗತು ಲ್ಢೀ ಗರಾಗರಾ
ಚ್ವೆಂಕಾ ಬುಲ್ ತಾ ನಾ ಲಚ್ಚುಂಡಿ




೩. ಭಾಹೀ ಬಂದರೂ ಚುಟ್ಟಾ ಪಂಕ್ಕಾ ಮರಾಮರಾ
ಜೀದ್ದಾ ಕೀ ಮಗ ಚ್ವೆಲೇ ಚ್ವೆ
ನಾತುಲ ಬಲ್ಲೆವನಸ್ತಾಳೇ ಜ್ವೆನಾಂದಿ ಚ್ವೆ
ನಗತು ಲೀಲಾ ನಗತು ಲ್ಢೀ ಗರಾಗರಾ
ಚವೆಂಕಾ ಬುಲ್ ತಾ ನಾ ಲಚ್ಚುಂಡಿ
"ಅಲ್ಲಿಯಾ ಬಾದ"

(ಕೃಷ್ಣಪ್ಪಾ., ಮೂಕಲ್‌ವಾಡಾ: ಶಾಹಾಪೂರ)

**ಭಾವಾರ್ಥ :** ಅಲೀಯಾಬಾದ್ ಎಂಬ ಊರಿನಲ್ಲಿ ಕೋಕಾ ದೊಡ್ಡಿ ಎಂಬ ಕೇರಿಯಲ್ಲಿ, ನಮ್ಮ ಸಮುದಾಯದ ಮನಿಗಳು ಈ ನಮ್ಮ ಸಮುದಾಯದಲ್ಲಿ ವಯಸ್ಸಿಗೆ ಬಂದ ಚಂಚಲು ಮನಸ್ಸಿನ ಹುಡುಗಿಗೆ ರೇಗಿಸುವುದರೊಂದಿಗೆ ನೀತಿಯ ಹೇಳುವ ಭಾವಾರ್ಥಗಳನ್ನು ಈ ಹಾಡಿನಲ್ಲಿರುತ್ತದೆ. ಲೇ ಜಗಳಗಂಟಿ ಹುಡುಗಿ ಗರಾಗರಾ ಕಣ್ಣು ತಿರುಗಿಸಿ ಅವರನ್ನು ಇವರನ್ನಾ ನೋಡ ಬ್ಯಾಡಲೇ ಹುಡುಗಿ,

ಮನೆಯಲ್ಲಿನ ಹಿರಿಯರಾದ ಅಣ್ಣ ತಮ್ಮ ಬಂಧು ಬಳಗದವರ ಮಾತು ಕೇಳಿ ನೀ ಅಂಜೀ ನಡೆಯಬೇಕು. ಇಲ್ಲದಿದ್ದರೆ ನೀನು ಒಂದು ದಿನ ಅರಣ್ಯ ಸೇರುವ ಸಂದರ್ಭ ಬರಬಹುದು. ಈ ಮಾತಿನ ಮರ್ಮವನ್ನು ತಿಳಿದು ನೀ ನಡೆಯಬೇಕಮ್ಮಾ ಹುಡುಗಿ ಎಂದೂ ರೇಗಿಸುವುದರೊಂದಿಗೆ ನೀತಿ ಹೇಲುವ ಅಂಶಗಳು ಹಾಡಿನಲ್ಲಿ ಬರುತ್ತವೆ.

**೩.೨. ನೀತಿ ಹೇಳುವ ಹಾಡುಗಳು**

ಸಮುದಾಯದಲ್ಲಿ ಹಿರಿಯರು ಕಿರಿಯರಿಗೆ ನೀತಿ ಹೇಳುವ ಹಾಡುಗಳನ್ನು ಹಾಡುತ್ತಾರೆ. ಹೊಸದಾಗಿ ಗಂಡನ ಮನೆಯಲ್ಲಿ ಸಂಸಾರ ಮಾಡುವ ಮಗಳಿಗೆ ನೀತಿ ಹೇಳುವ ಹಿನ್ನೆಲೆಯಲ್ಲಿ ಮತ್ತು ಹೆಣ್ಣಿನ ಶೀಲ ಸಚ್ಚಾರಿತ್ರ್ಯ ಜೀವನ ನಡೆಸುವುದುರ ಹಿನ್ನೆಲೆಯಲ್ಲಿ ದೈನಂದಿನ ಜವಾಬ್ದಾರಿಗಳನ್ನು ಅರಿತುಕೊಂಡು ಜೀವನ ಮಾಡುವುದರ ಹಿನ್ನೆಲೆಯಲ್ಲಿ ಒಟ್ಟು ಮೂರು ಹಾಡುಗಳನ್ನು ತಮ್ಮದೆ ಭಾಷೆಯಲ್ಲಿ ಹಾಡಿರುವುದನ್ನು ವಿವರಿಸಲಾಗಿದೆ.

**ಗಂಡನ ಮನೆಯಲ್ಲಿರುವ ಮಗಳಿಗೆ ನೀತಿ ಹೇಲುವ ಹಾಡು**

೧. ಅತ್ಯಾವು ಮಾರಲೇ ಮಾಮವು ಮಾರಲೇ
ಮುಂಡುಲಯೋ ಜಿಂದಗಾನೀ ಗೊಡಿ ಚೈಮ್ಮಾ
ಮುಂಡುನಯೋ ಜಿಂದಗಾನೀ ಗೊಡಿ ಚೈಮ್ಮಾ

೨. ಪೈಲಾರು ಜಮನಾ ಗೊಟ್ಟಾರಾತು ಪಾಡಲೇ
ಗುಡಿಮಹಾಲು ದೇಚಿ ಚ್ಚೋಡಿ ತೈಲನ್ ಮ್ಮಾ
ಪೈಲಾರು ಜಮಾನಾ ಗೊಟ್ಟಾರಾತು ಪಾಡಲೇ
ಗುಡಿ ಮಹಾಲು ದೇಚಿ ಚ್ಚೋಡಿ ತೈಲನ್ ಮ್ಮಾ

೩. ದೇವರು ಮಾರಲೇ ನೊಂದ್ಯಾವು ಮಾರಲೇ
ದೇವರು ಮಾರಲೇ ನೊದ್ಯಾವು ಮಾರಲೇ
ಮುಂಡ ಲೇವು ಜಿಂದಗಾನೀ ಗೊಡಿ ಚೈಮ್ಮಾ
ಮುಂಡಲೇವು ಜಿಂದಗಾನೀ ಗೊಡಿ ಚೈಮ್ಮಾ

೪. ಅತ್ಯಾವು ಮಾಮಾರು ಜಾಚು ವೈ ಲೇ
ಮಾಗೋರಿಗೂ ಚೈಯ್ಯು ಕಡ್‌ಚ್ನಯ್ ಮ್ಮಾ
ಮಾಗೋರಿಯಾ ಚೈಯ್ಯು ಕಡ್‌ಚ್ನಯ್ ಮ್ಮಾ

೫. ಅಕ್ಕನರ ಜಾಮಾನಾ ಬಿಕ್ಕನೇವು ಗೋಡಿ
ಮವ್ಹ್‌ಚ್ಚಲ್ ಮಂಕಿ ಚದರಿ ಮ್ಮಾ
ಮವ್ಹ್ ಚ್ಚುಲ್ ಮಂಕಿ ಚದರಿ ಮ್ಮಾ

೬. ಹಮಾರು ದಂದಾ ಅತ್ಯೇವು ರೈಸೇ
ಕ್ಯಾ ಹೋ ಗೋಡಿ ಕಚ್ಚೀ ಬಲ ಬೇ ರ್ಧ್ಹಿಮತ್‌ಮ್ಮಾ
ಕ್ಯಾ ಹೋ ಗೋಡಿ ಕಚ್ಚೀ ಬಲ ಬೇರ್ಧ್ಹಿಮತ್‌ಮ್ಮಾ
"ಅತ್ಯಾವು ಮಾರಲೇ"
(ನರಸಮ್ಮಾ ಗಂಡ ಯಂಕಪ್ಪಾ., ಗೌಡ್ಯಾ: ಗುಲಬರ್ಗಾ)

ಭಾವಾರ್ಥ : ಹೊಸದಾಗಿ ಗಂಡನ ಮನೆಯಲ್ಲಿ ನಡೆಯುವ ಮಗಳಿಗೆ ತಂದೆ ತಾಯಿಯರು ನೀತಿ ಹೇಳುವ ಅಂಶಗಳು ಈ ಹಾಡಿಗಲ್ಲಿರುತ್ತವೆ. ಮಗಳೇ ನಿನ್ನ ಗಂಡನ ಮನೆಯಲ್ಲಿ ಅತ್ತೆ ಮಾವ ಮುನಿಸಿಕೊಂಡು ಬೈದರೆ ತಿರುಗಿ ಮಾತನಾಡದೇ, ತಲೆಭಾಗಿ ನೀ ನಡೆಯಬೇಕಮ್ಮಾ ಮಗಳೇ, ಮೊದಲಕಾಲದಲ್ಲಿ ಒಂದು ರಾತ್ರಿ ಹೆಣ್ಣು ಹೊರಗಡೆ ಹೋದರೆ, ಕುಲದಿಂದ ಹೊರಗೆ ಹಾಕಿ ಬಿಡುತ್ತಿದ್ರೂಮ್ಮಾ. ಅದರ ಸಲುವಾಗಿ ನೀನು ಶೀಲವಂತಳಾಗಿ ಇರಬೇಕಮ್ಮಾ. ಈ ಮಾತು ನೆನಪಿನಲ್ಲಿಟ್ಟುಕೊಂಡು ಜೀವನ ಮಾಡಬೇಕಮ್ಮಾ ಮಗಳೇ, ಅಲ್ಲದೆ ಮೈದುನ ನಾದಿನಿಯರು ಮುನಿಸಿಕೊಂಡರೇ, ನಿಮ್ಮ ತಮ್ಮ ತಂಗಿ ಎಂದು ತಿಳಿಯ ಬೇಕಮ್ಮಾ ಮಗಳೇ, ಗಂಡನ ಮನೆಯಲ್ಲಿ ಬಹಳ ಕಿರಿ ಕಿರಿಯಾದರೂ ಕೂಡಾ, ತವರು ಮನೆಯಲ್ಲಿ ಚಾಡಿ ಹೇಳಬಾರದಮ್ಮಾ ಮಗಳೇ, ನಾವು ಬದುಕಲಿಕ್ಕೆ ನಮ್ಮ ಪತ್ತಾರಿಕೆ ಕಸುಬು ನಮ್ಮ ಕೈಯಲ್ಲಿದೆ. ಕಷ್ಟ ಸುಖಗಳನ್ನೇ ಇರಲಿ ಧೈರ್ಯದಿಂದ ಅವುಗಳನ್ನು ಎದುರಿಸಬೇಕು ಮಗಳೇ ಎಂದು ಹೇಳುವ ನೀತಿಯ ಅಂಶಗಳಿಗೆ ಈ ಹಾಡಿನಲ್ಲಿರುತ್ತವೆ.

ಹೆಣ್ಣಿನ ಕಷ್ಟ

೧. ಮನಿಗೂ ನಾತ್ತರು ಬಾತ್ತಾರಮ್ಮಾ
ಬನಿಕ್ಕೂ ಚಡದೀ ಜೈಲೇಮ್ಮಾ
ಬನ್ನಿಕ್ಕೂ ಚಡದೀ ಜೈ ತೀಮ್ಮಾ

೨. ಬಿಕ್‌ನೇವು ಕಾಲಾ ಡೈ ಲೇಮ್ಮಾ
ಬಿಕ್‌ನೇಕ್ಕು ತು ಜೈಯು ಬೊಚ್ಚೈಮ್ಮಾ
ಬಿಕ್‌ನೇಕ್ಕು ತು ಜೈಯು ಬೊಚ್ಚೈಮ್ಮಾ

೩. ಹೈಲೇಟ್ಟು ಕಷ್ಟ ಹೈ ಲೇಮ್ಮಾ
ಬಿಕ್‌ನೆವು ಗೋಡಿ ಹಚ್ಚೈಮ್ಮಾ
ಬಿಕ್‌ನೆವು ಗೋಡಿ ಹಚ್ಚೈಮ್ಮಾ

೪. ಚ್ಚಾರ್ನ್ಹಾ ಚು ಹಲ್ ಮಂಕೇ ಕಬ್ ಚೈಮ್ಮಾ
ಸ್ಟೇಗ್ಗಲ್ ಸೇನಿ ಹೈ ಗೊಡ ಚೈಮ್ಮಾ
ಮೋರೆನಾ ಚಿದೀ ಕೈ ಲೇ ಮ್ಮಾ

೫. ಮನಿಕ್ಕೂ ನಾತ್ತಾರು ಬಾತ್ತಾರಮ್ಮ
ಬನಿಕ್ಕೂ ಚ್ಚೋಡದಿ ಜೈಲೇಮ್ಮಾ
ಬನಿಕ್ಕೂ ಚ್ಚೋಡದಿ ಜೈಲೇಮ್ಮಾ

ನರಸಮ್ಮ ಗಂಡ ಯಂಕಪ್ಪಾಗೌಡ್ಡ ಗುಲ್ಬರ್ಗಾ

ಭಾವಾರ್ಥ : ಹೆಂಡತಿಯಾದವಳು ಮನೆಗೆ ಬರುವುದು ತಡವಾಯ್ತು ಅಂತಾ ಗಂಡನಾದವನ್ನು ಅವಳ ಶೀಲವನ್ನು ಶಂಖೀಸಿ ಅವಳೊಂದಿಗೆ ಸಂಸಾರ ಮಾಡುವುದಿಲ್ಲ. ಆಗ ಆಕೆ ತನ್ನ ನಾಲ್ಕು ಮಕ್ಕಳನ್ನು ಹೇಗೆ ಸಾಕಲಿ, ಅವರನ್ನು ಹೇಗೆ ಬದುಕಿಸಲೀ ಎಂಬ ಚಿಂತೆಯಲ್ಲಿ ಮಗ್ನಳಾಗಿ, ಕೊನೆಗೆ ಧೈರ್ಯದಿಂದ ತಮ್ಮ ಮನೆತನದ ಮೂಲ ಕಸುಬಾದ ಪತ್ತಾರಿಕೆಯಲ್ಲಿ ತೊಡಗಿ, ಕಷ್ಟ ಸುಖಿಗಳನ್ನು ಸಹಿಸಿಕೊಂಡು ಸ್ವತಂತ್ರವಾಗಿ ಜೀವ ನಡೆಸುವುದರೊಂದಿಗೆ, ಮಕ್ಕಳ ಪಾಲನೆ ಪೊಷಣೆ ಜವಾಬ್ದಾರಿಯನ್ನು ಹೊತ್ತುಕೊಂಡು, ಗಂಡಸರಿಗಿಂತ ನಾನೇನು ಕಡಿಮೆ ಇಲ್ಲ ಎಂಬುದು ತನ್ನ ದುಡಿಮೆಯಿಂದ ಸಾಧಿಸಿ ತೋರಿಸುತ್ತಾಳೆ.

**ದೈನಂದಿನ ಜವಾಬ್ದಾರಿ ಅರಿತ್ತುಕೊಳ್ಳುವ ಹಾಡು**

೧. ತ್ಯೋಂತಲ್ ಲಗಯ್ ಮಂಜ್‌ಮು
ದೌಡ್ ದೌಡ್ ಬುಸಯ್ ಗುಲೇಮು
ತ್ಯೋಂತಲ್ ಲಗಯ್ ಮಂಜ್‌ಮು
ದೌಡ್ ದೌಡ್ ಬುಸಯ್ ಗುಲೇಮು

೨. ಅತ್ನೇರು ಕಂಠೆ ಟೇನಿ ಬೀಕ್ ನಿತೇ
ಚ್ವಲ್ ರೇ ಅಪನೆ ಜೈಮಂತ್ ಚ್ವಲ್ ರೇ
ಜೈ ಮಂತ್ ಚ್ವೋಲ್ ಅಪನೆ

೩. ಕಂಟೈವು ನೀ ಹತ್ಯ, ದೌಡ್ ದೌಡ್ ಬುಲೀ ಬಿಕ್ ನಿತೇ
ಅಪನಾರು ಜಿಂದಗಾನಿ, ಹತ್ಯವುದರ್ ಲೇ ವೈಲೇ
ಜೈ ಮಂತ್ ಚ್ವಲ್ಲು ಅಪನೆ ಕೋ ತಾಗೂ ಬಿಕ್ ನೇ ಆಹಿತೀ

೪. ಹೈ ಹಾರು ಅಜಾರ್ ಅಗುಮಿ, ಬಿಕನೆಸು ಮೊರು ಕೊಡಿ,
ಚ್ವಲ್ ಲಗಾ ಗೋರ್ ಕೇ ಅಪನೆ, ಮೈಪೂ ಮಂತ್ತಾರು ಹತ್ಯೆ,
ಕೊಡಿಯು ದ್ವಿವು ಹೈಮು, ಅಪನಾರು ಕರ್ಚಾರು ಕೋಡಿ,
ತವ್ ಟೀ ಬಿಕನೇ ಹೈಮು ಅಪನಾರು ಕರ್ಚಾರು, ಚ್ವೆಲ್ ರೇ ಚ್ವಲ್ ರೇ
(ಲಲಿತಮ್ಮಾ ಗಂಡ ಚಂದ್ರಶ., ಮೂಕಲಾಜೀ: ಗುಲ್ಬರ್ಗಾ)

ಭಾವಾರ್ಥ : ಹುಣಸಿನಕಾಯಿಂದ ಆಭರಣಗಳನ್ನು ತೊಳೆದು ಬುಸ್‌ದಲ್ಲಿ ಹಾಕಿ ಸ್ವಚ್ಛಮಾಡಿಕೊಂಡು, ಎಲ್ಲ ಸಾಮಾನುಗಳನ್ನು ತೆಗೆದುಕೊಂಡು ಮಾರಾಟ ಮಾಡಲು ಹೋಗೋಣ ನಡಿರೀ ಎಂದು ಹೆಂಡತಿ

ಗಂಡನಿಗೆ ಹೇಳುತ್ತಾಳೆ. ನಮ್ಮ ಜವಾಬ್ದಾರಿಗಳನ್ನು ಅರಿತುಕೊಂಡು ನಮ್ಮ ಕೆಲಸಗಳನ್ನು ಮಾಡಿದರಾಯ್ತು ಎಂದು ಹೆಂಡತಿ ಗಂಡನಿಗೆ ಹೇಳುತ್ತಾಳೆ.

ಕೊನೆಗೆ ಇಬ್ಬರೂ ಹೋಗಿ ಮಾರಾಟಮಾಡಿ ಬಂದ ಮೇಲೆ ಈ ದಿನದ ವ್ಯಾಪಾರ ಎಷ್ಟಾಗಿದೆ ಎಂದು ಗಂಡ ಹೆಂಡತಿ ನೋಡಿದಾಗ ೨೦೦ ರೂಪಾಯಿಗಳಾಗಿರುವುದು ನೋಡಿ ತುಂಬಾ ಸಂತೊಷಪಟ್ಟುಕೊಂಡು, ಆ ಹಣವನ್ನು ತಮ್ಮ ಮನೆಯಲ್ಲಿ ಇರುವಂತಹ ತಂದೆ ತಾಯಿಗಳಿಗೆ ತಂದು ಕೊಟ್ಟು ತಮ್ಮ ಜವಾಬ್ದಾರಿ ಮುಗಿಸಿಕೊಳ್ಳುತ್ತಾರೆ. ಕುಟುಂಬದ ಹಿರಿಯರು ಕುಟುಂಬದ ಜವಾಬ್ದಾರಿ ನಿರ್ವಹಿಸಿಕೊಂಡು ಹೋಗುತ್ತಾರೆ ಎಂಬುದು ಈ ಹಾಡಿನಲ್ಲಿ ತಿಳಿದು ಬರುತ್ತದೆ.

### ೩.೩. ವಿವಾಹ ಗೀತೆಗಳು

ವಿವಾಹದ ವಿವಿಧ ಆಚರಣೆಗಳಿಗೆ ಸಂಬಂಧಿಸಿದಂತೆ ಬೈಲುಪತ್ತಾರರು ಅನೇಕ ಹಾಡುಗಳನ್ನು ಹಾಡುತ್ತಾರೆ. ಇವರು ವಿವಾಹದ ಆರಂಭದಿಂದ ಕೊನೆಯವರಿಗೆ ಶೃಂಗಾರ, ವ್ಯಂಗ, ಪ್ರಣಯ, ಮಂಗಲ ಗುಣಗಾನದ ಹಾಡುಗಳನ್ನು ತುಂಬಾ ವಿಶಿಷ್ಟ ಹಾಗೂ ಅರ್ಥಪೂರ್ಣವಾಗಿ ಹಾಡುತ್ತಾರೆ. ಅಲ್ಲದೆ ಇವರು ಮಾಡುವ ಮದುವೆ ಸಂದರ್ಭದಲ್ಲಿನ ವಿವಿಧ ಹಂತದ ಪದ್ಧತಿಗಳ ವಿವರಣೆಯ ಹಿನ್ನಲೆಯಲ್ಲಿ ಹಾಡುಗಳನ್ನು ಆಡುತ್ತಾರೆ.

**ಸೋಬಾನ ಹಾಡು**

೧. ತುಮೆ ಮುತ್ತೈದೇ ಮನೆ, ತುಮೇ ಲುಗೋನೇಸನಮ್ಮಾ
ತುಮೆ ಮುತ್ತೈದೇ ಮನೆ, ತುಮೇ ಲುಗೋನೇಸನಮ್ಮಾ
ಹಮಾರ್ ಕನ್ಯೆ ಚ್ಛುಹಾಗು ತುಮೇ ಲುಗೋ ಫಿಂದ್ಯೆಮ್ಮಾ
ಹಮಾರ್ ಕನ್ಯೆ ಚ್ಛುಹಾಗು ತುಮೇ ಲುಗೋ ಫಿಂದ್ಯೆಮ್ಮಾ

೨. ರೈಕೇ ನೆಸನ್‌ಮ್ಮಾ, ತುಮೇ ಮುತ್ತೈದೇ ಮನೆ
ರೈಕೇ ನೇಸನ್‌ಮ್ಮಾ, ತುಮೇ ಮುತ್ತೈದೇ ಮನೆ
ಹಮಾರ್ ಕನ್ಯೆ ಚ್ಛುಹಾಗು ತುಮೇ ರೈಕೇ ಫಿಂದ್ಯೆಮ್ಮಾ
ಹಮಾರ್ ಕನ್ಯೆ ಚ್ಛುಹಾಗು ತುಮೇ ರೈಕೇ ಫಿಂದ್ಯೆಮ್ಮಾ

೩. ದಂಡಿಗೆ ನೆಸನ್‌ಮ್ಮಾ, ತುಮ ಮುತ್ತೈದೇ ಮನೇ
ದಂಡಿಗೆ ನೆಸನ್ ಮ್ಮಾ, ತುಮ ಮುತ್ತೈದೇ ಮನೆ
ಹಮಾರ್ ಕನ್ಯೆ ಚ್ಛುಹಾಗು ತುಮೇ ದಂಡಿಗೆ ಫಿಂದ್ಯೆಮ್ಮಾ
ಹಮಾರ್ ಕನ್ಯೆ ಚ್ಛುಹಾಗು ತುಮೇ ದಂಡಿಗೆ ಫಿಂದ್ಯೆಮ್ಮಾ

೪. ಕೊಬರೇ ನೆಸನ್ ಮ್ಮಾ ತುಮೇ ಮುತ್ತೈದೇ ಮನೆ
ಕೊಬರೇ ನೆಸನ್ ಮ್ಮಾ ತುಮೇ ಮುತ್ತೈದೇ ಮನೆ

ಹಮಾರ್ ಕನ್ಯೆ ಚ್ಚು ಹಾಗು ತುಮೇ ಹಂಟೋ ಪುರೌ ವ್ಹಾ
ಹಮಾರ್ ಕನ್ಯೆ ಚ್ಚು ಹಾಗು ತುಮೇ ಹಂಟೋ ಪುರೌ ವ್ಹಾ

೫. ಕುಕುಮೊ ನೇಸನ್ ಮ್ಮಾ, ತುಮೇ ಮುತ್ತೈದೇ ಮನೆ
ಕುಕುಮೊ ನೇಸನ್ ಮ್ಮಾ, ತುಮೇ ಮುತ್ತೈದೇ ಮನೆ
ಹಮಾರ್ ಕನ್ಯೆ ಚ್ಚುಹಾಗು ತುಮೇ ಕುಕುಮೋ ಲಗಾವ್ಹ್
ಹಮಾರ್ ಕನ್ಯೆ ಚ್ಚುಹಾಗು ತುಮೇ ಕುಕುಮೋ ಲಗಾವ್ಹ್

೬. ಕಾಂಚು ನೆಸನ್ಮ್ಮಾ, ತುಮೇ ಮುತ್ತೈದೇ ಮನೆ
ಕಾಂಚು ನೆಸನ್ಮ್ಮಾ, ತುಮೇ ಮುತ್ತೈದೇ ಮನೆ
ಹಮಾರ್ ಕನ್ಯೆ ಚ್ಚುಹಾಗು ತುಮೇ ಕಾಂಚು ಫಿಂದ ವ್ಹಾ
ಹಮಾರ್ ಕನ್ಯೆ ಚ್ಚುಹಾಗು ತುಮೇ ಕಾಂಚು ಫಿಂದ ವ್ಹಾ
(ನರಸಮ್ಮ ಗಂಡ ಯಂಕಪ್ಪಾ, ಗೌಡ್ಕ: ಗುಲ್ಬರ್ಗಾ)

ಭಾವಾರ್ಥ : ಈ ಹಾಡು ಸೋಬಾನ ಮಾಡುವ ಸಂದರ್ಭದಲ್ಲಿ ಸಮುದಾಯದ ಹೆಣ್ಣುಮಕ್ಕಳು ಹಾಡುತ್ತಾರೆ. ಅಂದರೆ, ಹೆಣ್ಣಿಗೆ ಸಿಂಗಾರಿಸುವ ವಿವಿಧ ಅಂಶಗಳು ಈ ಹಾಡಿನ ಸಾಲಿನಲ್ಲಿರುತ್ತವೆ. ಪ್ರಾರಂಭದಲ್ಲಿ ಸೀರೆ ತಂದಿರೇ ನೀವು ಸೀರೆ ತಂದಿರೇ ನಾರೇರೆಲ್ಲರು, ನಮ್ಮ ಜಾಣ ಪ್ರೆಮತಿಗೆ ಸೀರೆ ಉಡಿಸಿರೇ ಎನ್ನುವ ಅರ್ಥದ ಸಾಲುಗಳಿರುತ್ತವೆ. ಎರಡನೆಯ ನುಡಿಯ ಸಾಲಿನಲ್ಲಿ ಕುಪ್ಪಸ ತಂದಿರೇ ನೀವು ನಾರೇರೆಲ್ಲರೂ, ನಮ್ಮ ಜಾಣ ಪ್ರೇಮತಿಗೆ ಕಪ್ಪಸ ಉಡಿಸಿರೇ ಎಂದು ಹೇಳಲಾಗುತ್ತದೆ. ಮೂರನೆಯ ನುಡಿಯ ಸಾಲಿನಲ್ಲಿ ದಂಡಿ ತಂದಿರೇ ನಮ್ಮ ಜಾಣ ಪ್ರೇಮತಿಗೆ ನೀವು ದಂಡಿ ತೊಡಿಸಿರೇ ಎನ್ನಲಾಗುತ್ತದೆ. ನಾಲ್ಕನೆಯ ನುಡಿಯಲ್ಲಿ ಕೊಬರಿ ತಂದಿರೇ ನಮ್ಮ ಜಾಣ ಪ್ರೇಮತಿಗೆ ನೀವು ಉಡಿಯ ತುಂಬಿರೇ ಎಂದು ಹೇಳಲಾಗುತ್ತದೆ. ಐದನೆಯ ನುಡಿಯಲ್ಲಿ ಕುಂಕುಮ ಹಚ್ಚಿರೆ ನಾರೆರೆಲ್ಲರೂ ನಮ್ಮ ಜಾಣ ಪ್ರೇಮತಿಗೆ ಎಂದು ಹೇಳಿ ಕೊನೆಯ ಅಥವಾ ಆರನೆಯ ನುಡಿಯಲ್ಲಿ ಮುತ್ತೈದಿಯ ಸಂಕೇತವಾದ ಹಸಿರುಬಳೆಯನ್ನು ತಂದಿರೇ ನಾರೆರೆಲ್ಲರೂ ಹಸಿರುಬಳೆಯ ತಂದಿರೇ ನಮ್ಮ ಜಾಣ ಪ್ರೇಮತಿಗೆ ಹಸಿರು ಬಳೆ ತೊಡಿಸಿರೇ ಎಂದು ಹೇಳುವ ಮೂಲಕ ಕೊನೆಗೊಳ್ಳುತ್ತದೆ. ಈ ಹಾಡು ಸಂಪ್ರಾದಾಯಿಕ ಕಾರ್ಯಕ್ರಮಗಳಲ್ಲಿ ಬಹಳ ಮಹತ್ವವಾದುದಾಗಿದೆ.

**ಮದುವೆ ಹಾಡು**

೧. ಕಲ್ಯಾಣಪುರರ ಬಿಂತ್ತರ್, ಶರಣಬಸವೇಶ್ವರ ರಟ್ಯೆ
ಕಲ್ಯಾಣಪುರರ ಬಿಂತ್ತರ್, ಶರಣಬಸವೇಶ್ವರ ರಟ್ಯೆ
ಚನ್ನ ಬಸವೇಶ್ವರ ಕೂಮಾರ್ ವೈಲೇ ದಿಕಮ್ಮಾ
ಸಂಗ್ಯವು ಗೊಡಲು ದಿಕ್ಮ್ಮಾ ಎ ಬಸವಣ್ಣಾರ್ ಸಂಗ್ಯವು
ವೈಲೇ ದಿಕ್ ಮ್ಮಾ ಎ ಬಸವಣ್ಣಾರ್ ಸಂಗ್ಯವು ವೈಲೇ ದಿಕ್ ಮ್ಮಾ

೨. ಕುಮಾರರ್ ಗೊರರ್ ಸಮು ಕನ್ಯೆರ್ ಪಂದ್ರಿಮಾರಿ
ಕುಮಾರರ್ ಗೊರರ್ ಸಮು ಕನ್ಯೆರ್ ಪಂದ್ರಿ ಪಗ್ಯೆ
ನೀಲಮ್ಮಾ ಕನ್ಯೆ ಚ್ವ ವ್ಯೆಲೇ ದಿಕ್‌ಮ್ಮಾ ಸಂಗ್ಯವು
ಗೊಡಲು ದಿಕ್ ಮಾ ಏ ಬಸವಣ್ಣರ್ ಸಂಗ್ಯವು ವ್ಯೆಲೇ ದಿಕಮ್ಮಾ

೩. ಪಾರ್ವತಿ ಪರಮೇಶ್ವರುಂಡಿ, ಹೊಲ್ಡು ಲಗ್ಯೆಲಂತ್ತು ದಿಕ್‌ಮ್ಮಾ
ಪಾರ್ವತಿ ಪರಮೇಶ್ವರುಂಡಿ ಹೊಲ್ದು ಲಗ್ಯೆ ಲಂತ್ತು ದಿಕ್ ಮ್ಮಾ
ಬ್ರಹ್ಮ ದೆಮ್ಮುಲೋ ಹಸಿಹಂಟೊ ಪುರ್ಯೆ ಜ್ಯೆ ಲೇ ದಿಕ್‌ಮ್ಮಾ
ಸಂಗ್ಯವು ವ್ಯೆಲೇ ದಿಕಮ್ಮಾ ಎ ಬಸವಣ್‌ರ ಸಂಗ್ಯವು ವ್ಯೆಲೇ ದಿಕ್‌ಮ್ಮಾ

೪. ಗಂಗಮ್ಮಾ ಗೌರಮ್ಮರುಂಡಿ ಪಂಚರಂಗೀ ಚ್ವಾಲ್ ವಾ ನೆಸೀ
ಗಂಗಮ್ಮಾ ಗೌರಮ್ಮರುಂಡಿ ಪಂಚರಂಗೀ ಚ್ವಾಲ್ ವಾ ನೆಸೀ
ಬ್ರಹ್ಮದೇವತ್ತು ಹಸಿ ಶಾಸ್‌ಪಗ್ಯೆ ಚ್ಯೆಲೇ ದಿಕ್‌ಮ್ಮಾ
ಸಂಗವು ವ್ಯೆಲೇ ದಿಕಮ್ಮಾ ಎ ಬಸವಣರ್ ಸಂಗ್ಯವು ವ್ಯೆಲೇ ದಿಕ್‌ಮ್ಮಾ

೫. ಪಾರ್ವತಿ ಪರಮೇಶ್ವರ ರುಂಡಿ ಹತ್ಯೆ ಕಂಕಣಂ
ಬಂದುಲಂತು ದಿಕ್‌ಮ್ಮಾ ಪಾರ್ವತಿ ಪರಮೇಶ್ವರ ರುಂಡಿ
ಹತ್ಯೆ ಕಂಕಣಂ ಬಂದುಲಂತು ದಿಕ್‌ಮ್ಮಾ
ಬ್ರಹ್ಮ ದೇವತ್ ಹಸೀ ತಾಳಿ ಬಂದಿ ಜ್ವೆಲೇ ದಿಕ್‌ಮ್ಮಾ
ಸಂಗ್ಯವು ವ್ಯೆಲೇ ದಿಕಮ್ಮಾ ಎ ಬಸವಣಾರ್ ಸಂಗ್ಯವು ವ್ಯೆಲೇ ದಿಕಮ್ಮಾ

೬. ಋಕ್ಮಣಿದೆವಿ ಅನುಸುಯಾರುಂಡಿ ರಂದಾಕಾದು
ಗೋಡ್ಲಂತು ದಿಕ್‌ಮ್ಮಾ ಋಕ್ಮಿಣಿದೇವಿ ಅನುಸುಯಾರುಂಡಿ
ರಂದಾಕಾದು ಗೊಡ್ಲಂತು ದಿಕ್‌ಮ್ಮಾ ಆರುತಿ ಗೊಡ್ಲೇ
ಬಲ್ಲೇ ಭೂ ಆಕಾಶ್ ಬುಲೇ ದಿಕ್‌ಮ್ಮಾ ಸಂಗ್ಯವು ವ್ಯೆಲೇ ದಿಕ್‌ಮ್ಮಾ
ಎ ಬಸವಣ್ಣಾರ್ ಸಂಗವು ವ್ಯೆಲೇ ದಿಕಮ್ಮಾ

೭. ಬಾದೂರ್ ಬಂಡಿಯ ನೆಸಿ, ಬಿರಾರ್ ವನ್ನೆರ್ ಗ್ವೆನೆಸೀ
ಬಾದೂರ್ ಬಂಡಿಯನೆಸಿ, ಬಿರಾರ್ ವನ್ನೆರ್ ಗ್ವೆನೆಸೀ
ನಾರಾಯಣ ಹಸಿ ಮೆರವಣಿಗೆ ಕಡ್ಲೇ ದಿಕ್‌ಮ್ಮಾ
ಸಂಗ್ಯವು ವ್ಯೆಲೇ ದಿಕಮ್ಮಾ ಎ ಬಸವಣರ್ ಸಂಗ್ಯವು ವ್ಯೆ ಲೇ ದಿಕ್‌ಮ್ಮಾ

೮. ಬಂತ್ತೂಗ್ ಅಂತ್ತುಗ್ ಸ್ಟೇಗ್ಗಲ್ ರುಂಡಿ, ಕೊಬ್ರಿಕಾರಿಗ್ ಬಂಗಲನ್ ದಿಕಮ್ಮಾ,
ಬಂತ್ತೂಗ, ಅಂತ್ತುಗ್ ಸ್ಟೇಗಲ್ ರುಂಡಿ, ಕೊಬ್ರಿಕಾರಿಗ್ ಬಂಗಲ್‌ನ ದಿಕಮ್ಮಾ
ಕಾಳ ಬಂಟಾಲ್ ಲಗ್ವೆ ಬಂಟಿ ನೀ ಜ್ಯೆಲನ್ ದಿಕಮ್ಮಾ ಸಂಗ್ಯವು ವ್ಯೆಲೇ ದಿಕ್‌ಮ್ಮಾ
ಎ ಬಸವಣಾರ್ ಸಂಗ್ಯಾವು ವ್ಯೆಲೇ ದಿಕ್‌ಮ್ಮಾ

(ನರಸಮ್ಮ ಗಂಡ ಯಂಕಪ್ಪ., ಗೌಡ್ಕ: ಗುಲ್ಬರ್ಗಾ)

ಭಾವಾರ್ಥ : ಮದುವೆ ಸಂದರ್ಭದಲ್ಲಿ ಹಾಡುವ ಈ ಹಾಡಿನಲ್ಲಿ, ಬಸವಣ್ಣನವರ ಮದುವೆ, ಅಂಶಗಳ ಹಿನ್ನಲೆಯಲ್ಲಿ ರಚಿಸಲಾಗಿದೆ. ಮೊದಲಿಗೆ ಕಲ್ಯಾಣಪುರದಲ್ಲಿ, ಶರಣಬಸವೇಶ್ವರ ನೆಲೆಸಿರುವಲ್ಲಿ, ಬಸವಣನವರಿಗೆ ಮಧುಮಗನ ಮಾಡಿ, ಅರಸನ ಆಸ್ಥಾನದ ಮುಂದೆ, ಸರಸ್ವತಿಯ ಹಂದರವ ಹಾಕಿ, ನಿಲ್ಲಮ್ಮಾ ನನ್ನು ಮಧುಮಗಳನ್ನು ಮಾಡಿ ಬಸವಣನವರ್ ಮದುವೆ ಮಾಡಿದರೆ ಎಂದು ಹೇಳುತ್ತಾ. ಹಾಗೇ ಮುಂದುವರೆದು ಪಾರ್ವತಿ ಪರಮೇಶ್ವರರು ಬಂದು ಮಧುಮಕ್ಕಳಿಗೆ ಅರಿಷಿಣ ಹಚ್ಚಿ ನೀರುಹಾಕಿದ ಮೇಲೆ ಬ್ರಹ್ಮದೇವರು ಬಂದು ಉಡಿತುಂಬುತ್ತಾನೆ ಮತ್ತೇ ಪಾರ್ವತಿ ಪರಮೇಶ್ವರರು ಸೇರಿ ಮದುಮಕ್ಕಳಿಗೆ ಕಂಕಣ ಕಟ್ಟುತ್ತಾರೆ. ಆಗ ಬ್ರಹ್ಮದೇವರು ಮುಂದಿನ ತಾಳಿಕಟ್ಟುವ ಮಂತ್ರವು ಹೆಳುತ್ತಾನೆ. ತಾಳಿ ಕಟ್ಟಿದ ಮೇಲೆ ಗಂಗಮ್ಮಾ ಗೌರಮ್ಮರು ಬಂದು ಐದು ದಿನಸಿನ ಅಕ್ಕಿಕಾಳುಗಳನ್ನು ಹಂಚುತ್ತಾರೆ. ಆಗ ಎಲ್ಲರೂ ಅಕ್ಕಿಕಾಳು ಹಾಕಿದ ಮೇಲೆ ಋಕ್ಮಿಣಿದೇವಿ ಅನೂಸೂಯ ಕೂಡಿ ವಿವಿಧ ರೀತಿಯ ಅಡಿಗೆಯಾ ಊಟ ಮಾಡಿಸಿ, ಮಧುಮಕ್ಕಳಿಗೆ ಆರುತಿ ಬೆಳಗುತ್ತಾರೆ. ಆರುತಿ ಬೇಳಗಿದ ಮೇಲೆ ನವಿಲು ಬಣ್ಣದ ಹೋರಿಯ ಬಂಡಿಯ ಮೇಲೆ ಮಧುಮಕ್ಕಳಿಗೆ ಕೂಡಿಸಿ ಮೆರವಣಿಗೆ ನಡೆಯುತ್ತದೆ. ಕೊನೆಯಲ್ಲಿ ಉಡಿತುಂಬಿದ ಕೊಬ್ರಿಗಳನ್ನು ಎಲ್ಲರೂ ಹಂಚಿಕೊಳ್ಳುತ್ತಾರೆ.

**ಸಾಧು ಸಜ್ಜನರ ಪಂಕ್ತಿಊಟ**

೧. ಸಾಧು ಸಜ್ಜನ್ ಗೊರಕೆ ಹ್ಯೆಲಂತ್‌ಮ್ಮಾ, ಸಾಧು ಸಜ್ಜನರ್
ಗೊರಕೆ ಹ್ಯೆಲಂತಮ್ಮಾ ಲಮೇ ಕಾದು ಗೊಡಿ ಕಾವ್ವವ್ವ
ದೈತೋ ರಾಮ ರಾಮ, ಲೇಮೋ ಕಾದು ಗೊಡಿ ಕಾವ್ವವ್ವ ದೈ ತೋ ರಾಮ ರಾಮ

೨. ಓನಂ ಕಬೀರ್ ಸಾಹುಕಾರರ್ ಗೋರಿ ಕೈ
ಓನಂ ಕಬೀರ್ ಸಾಹುಕಾರರ ಗೋರಿ ಕೈ
ತೀವು ದೇಣಾವು ದೆ ಸಾಹುಕಾರ ದೈತೋ ರಾಮರಾಮ
ತೀವು ದೇಣಾವು ದೇ ಸಾಹುಕಾರ ದೈತೋ ರಾಮರಾಮ

೩. ದೊಬ್ಬೋ ಕುಬುನು ಗಿರಿವೆವು ರೋವ್ಹಾ
ದೊಬ್ಬೋ ಕುಬುನು ಗಿರಿವೆವು ರೋವ್ಹಾ
ಮಿ ಹೋ ಬೆಲೇ ಕಗೀ ದಿಚ್ಚಂ ಮುದ್ಯೆತೋ ರಾಮರಾಮ
ಮಿ ಹೋ ಬೆಲೇ ಕಗೀ ದಿಚ್ಚಂ ಮುದ್ಯೆತೋ ರಾಮರಾಮ

೪. ಕುಬುನ್ನು ನಹಿಃ ದೊಬ್ಬುವು ನಹಿಃ
ಕುಬುನ್ನು ನಹಿಃ ದೊಬ್ಬುವು ನಹಿಃ
ಮೆರು ಮ್ಯೆ ಪೊರು ಹೊರತ್ತು ಕಿ ಚೋ ನಹಿಃ ದೈ ತೋ ರಾಮರಾಮ
ಮೆರು ಮ್ಯೆ ಪೊರು ಹೊರತ್ತು ಕಿ ಚೋ ನಹಿಃ ದೈ ತೋ ರಾಮರಾಮ

೫. ಹೊನಂ ಕಬೀರ್ ಗೊರಕೆವೊ ಹ್ಯೆ ಲೇ
ಹೊನಂ ಕಬೀರ್ ಗೊರಕೆವೊ ಹ್ಯೆ ಲೇ
ವಾರು ಮ್ಯೆವೊಗು ಡಾಕಿ ಕಡ್ವೆಲೇ ದೇವತೋ ರಾಮರಾಮ
ವಾರು ಮ್ಯೆವೊಗು ಡಾಕಿ ಕಡ್ವೆಲೇ ದೇವತೋ ರಾಮರಾಮ

೬. ತೀವು ಮೊರು ವಚನ್ಯೆಗೂ ಸರಸೇಲಾಲಾ ದ್ಯೆತೋ ರಾಮರಾಮ
ತೀವು ಮೊರು ವಚನ್ಯೆಗೂ ಸರಸೇಲಾಲಾ ದ್ಯೆತೋ ರಾಮರಾಮ
ಕಬೀರ್ ಮ್ಯೆಪೋ ಸಾಹುಕಾರರ ಗೊರಿ ಕೈ
ಕಬೀರ್ ಮ್ಯೆಪೋ ಸಾಹುಕಾರರ ಗೊರಿ ಕೈ
ತಿವು ದ್ವಾರ್ಯೆಯು ಕಾಡೋ ದ್ಯೆತೋ ರಾಮ ರಾಮ
ತಿವು ದ್ವಾರ್ಯೆಯು ಕಾಡೋ ದ್ಯೆತೋ ರಾಮ ರಾಮ

೭. ಕಂಚಮು ಮುಂತ್ತು ಮಂಜೀ ಕಡೆಯು ಗೊಬ್ಬರ
ಕೂಡಾ ಕಡ್‌ಚಂ ನಿವು ನೌಕರಾಣಿ ವ್ಯೆಯು ರಚಂ
ದ್ಯೆವತೋ ರಾಮರಾಮ ನೀವು ನೌಕರಾಮಿ ವ್ಯೆಯು
ರಚಂ ದ್ಯೆತೋ ರಾಮರಾಮ

೮. ದೂದ್ ಬಾತು ಕೈ ಬೇಟ್ಟು ತಿವೋ, ಮಂಚಾರ್ ಉಪಾರ್
ರ್ಯೆ ಸುಬೇಟ್ಟು ತಿವೋ, ಮೆರ್ಯೆಗೊರು ಮ್ಯೆಪೋ
ತಿವು ದ್ಯೆತೋ ರಾಮರಾಮ ಮೇಶ್ವಿಗೊರು
ಮ್ಯೆಪೋ ತಿವು ದ್ಯೆತೋ ರಾಮರಾಮ

೯. ಚೇ ಚೇ ಚೆಚೇ ಸಾಹುಕಾರ ಏಕೀರಾವು
ಚೇ ಚೇ ಚೆಚೇ ಸಾಹುಕಾರ ಏಕೀರಾವು
ನಿವು ತೊರ ಬ್ಯೆನೇರು ದಾಖಲು ದೇವತೋ
ರಾಮರಾಮ ನಿವು ತೊರ ಬ್ಯೆನೇರು ದಾಖಲು
ದೇವತೋ ರಾಮರಾಮ

೧೦. ಹೊನು ಜೆಮಾರಿ ಪಂಗತ್ತಿ ಊಟ್ ಜ್ಯೆಲೇ ದ್ವೆತೋ
ರಾಮರಾಮ, ಹೋನು ಜ್ಯೆಮಾರಿ ಪಂಗತ್ತಿವಾಟ್
ಜ್ಯೆ ಲೇ ರಾಮರಾಮ

(ನರಸಮ್ಮಾ ಗಂಡ ಯಂಕಪ್ಪಾ., ಗೌಡ್ಕ: ಗುಲ್ಬರ್ಗಾ)

**ಭಾವಾರ್ಥ :** ಸಾಧು ಸಜ್ಜನರು ಕಬ್ಬೀರನ ಮನೆಗೆ ಬರುತ್ತಾರೆ. ಕಬ್ಬೀರನ ಮನೆಗೆ ಬಂದ ಮೇಲೆ ಕಬೀರ್ ನಮ್ಮಗೆ ಹಸಿವೆಯಾಗಿದೆ. ನಿಮ್ಮ ಮನೆಯಲ್ಲಿ ನಮ್ಮಗೆ ಊಟದ ವ್ಯವಸ್ಥೆ ಮಾಡು ಎಂದು ಕೇಳುತ್ತಾರೆ. ಆಗ ಕಬೀರನ ಮನೆಯಲ್ಲಿ ಊಟದ ವ್ಯವಸ್ಥೆಗೆ ಯಾವುದೇ ರೀತಿಯ ಅನುಕೂಲಗಳಿರುವುದಿಲ್ಲ.

ಆಗ ಕಬೀರನು ಸಾಹುಕಾರನ ಮನೆಗೆ ಸಾಲ ಕೇಳಲು ಹೋಗುತ್ತಾನೆ. ಸಾಹುಕಾರನ್ನು "ನಾನು ನಿನಗೆ ಸಾಲ ಕೊಡುತ್ತೇನೆ ಆದರೆ ನನ್ನಲ್ಲಿ ನಿನ್ನು ಯಾವುದಾದರೂ ವಸ್ತುಗಳನ್ನು ಒತ್ತಿಟ್ಟರೆ ಕೊಡುತ್ತೇನೆ" ಎಂದು ಹೇಳುತ್ತಾನೆ. ಕಬ್ಬೀರ ನಾನು ಬಡವ ನನ್ನ ಹತ್ತಿರ ಬೆಳ್ಳಿ ಬಂಗಾರ ಯಾವುದು ಇಲ್ಲ ಸಾಹುಕಾರ ಎಂದು ಹೇಳುತ್ತಾನೆ. ಆಗ ಸಾಹುಕಾರನ್ನು ನಿನ್ನ ಹೆಂಡತಿಗೆ ಒತ್ತಿಡು ಎಂದು ಹೇಳುತ್ತಾನೆ. ಕಬೀರನ್ನು ತನ್ನ ಹೆಂಡತಿಗೆ ಕರೆದುಕೊಂಡು ಬಂದು ಸಾಹುಕಾರನ ಮನೆಗೆ ಬಿಟ್ಟು, ಹಣ ತೆಗೆದುಕೊಂಡು ಹೋಗಿ ಊಟದ ವ್ಯವಸ್ಥೆ ಮಾಡುತ್ತಾನೆ. ಸಾಹುಕಾರನು ಅವಳು ಮನೆಗೆ ಬಂದ ಮೇಲೆ ಅವಳಿಗೆ ನಿನ್ನು ನನ್ನ ಪಟ್ಟದ ರಾಣಿಯಾಗೂ ಎಂದು ಹೆಳುತ್ತಾನೆ. ಇಂತಹ ಕಾಮುಕ ದೃಷ್ಠಿಗೆ ಒಳಗಾಗದ ಇವಳು ಸಾಹುಕಾರನ ಮನೆಯ ಆಳಾಗಿ ಹೆಂಡಿ ಕಸ ಬಳಿಯುತ್ತೇನೆ. ನಿಮ್ಮ ಮನೆಯಲ್ಲಿ ನಿಮ್ಮ ತಂಗಿಯಾಗಿ ಇರುತ್ತೇನೆ ಎಂದು ಹೇಳುತ್ತಾಳೆ. ಕೊನೆಗೆ ಸಾಹುಕಾರ ಒಪ್ಪದೆ ಇಲ್ಲ ನನ್ನ ದಾಸಿಯಾಗಿಯೇ ಇರಬೇಕು ಎಂದು ಹಟ್ಟ ಮಾಡುತ್ತಾನೆ. ಆಗ ಅವಳು ಸಾಹುಕಾರನ ಮನೆಯಿಂದ ತನ್ನ ಗಂಡನ ಮನೆಗೆ ಬಂದು ಕುಳಿತುಕೊಂಡಿರುವ ಪಂಕ್ತಿಗೆ ಜೈ ಹೊಡೆದು ಊಟ ಸಾಗಲಿ ಮಾಹಾಋುಷಿಗಳೇ ಎಂದು ಹೇಳುತ್ತಾಳೆ. ಈ ಹಾಡಿನ ಮುಖ್ಯ ಭಾವಾರ್ಥವೆನೆಂದರೆ. ನೀತಿಗೆಟ್ಟು ಜೀವನ ಮಾಡುವವರಿಂದ ದೂರವಿರುವುದು ಅಲ್ಲದೆ, ಇಂತಹ ನೀತಿಗೆಟ್ಟವರೊಂದಿಗೆ ಮಾಡಿಕೊಂಡಿರುವ ಒಪ್ಪಂದಗಳನ್ನು ಮುರಿದು ಹಾಕುವ ಅಂಶ ಒಳಗೊಂಡಿದೆ.

**ಮದುವೆಯ ವಿವಿಧ ಹಂತಗಳ ಹಾಡು**

ಅಮರೆಕು ಬುಲ್ ವೈಜೈಲೇ, ತೋರು ಸಂಗ್ಯ ವೈಜೈಲೇ
ಅಮರೆಕು ಬುಲ್ ವೈಜೈಲೇ, ತೋರು ಸಂಗ್ಯ ವೈಜೈಲೇ

೧. ಪೈಲಾದಿನ ಪಂದರಿಕ್ ಶಲ್ಕೀ ಕಾಟ್ ಲಂತ್ತು, ಪೈಲಾದಿನ್
ಪಂದರಿಕ್ ಶಲ್ಯ ಕಾಟ್ ಲಂತ್ತು ಕಾಳುಲಗ್ಯೆ ಲಂತ್ತು ವ್ಹಾಯೇ ಬಂಟೀ ನಿಜೈಲಂತು ||ಅಮರೆಕು||

೨. ಮದ್ದು ಬುಟ್ಯೆಲಂತ್ತು ತಿಕೀ ಮದ್ದು ಬುಟ್ಯೆಲಂತ್ತು
ತಿಕೀ ಕಾಂಚು ಘಿಂದ್ಯೆಲಂತ್ತು ಮಿಕೆ ಎರಕಾ ವೈಜೈಲೇ ||ಅಮರೆಕು||

೩. ಹೊಲ್ದುಲಗ್ಯೆಲಂತ್ತು. ವ್ಹಾಯೋ ಹೊಲ್ದುಲಗ್ವೆಲಂತ್ತು
ಪಾನಿ ಬುರ್ಲಂತು ಕೌಟಲು ಘಿಂಧ್ಯೆಲಂತ್ತು ಮಿಕೆ ಎರಕಾ ವೈ ಜ್ವೆಲೇ ||ಅಮರೆಕು||

೪. ಶಾಸಲು ಕಟ್ಯಾಗು ಬೋಸ್ಯೆಲಂತ್ತು, ಹಂಟೋಪುರೇಲಂತ್ತು
ತಿಕೀ ತಾಳಿ ಬಂದಲಂತ್ತು ಮಿಕೆ ಎರಕಾ ವೈಜೈಲೇ
ತೊರು ಸಂಗ್ಯಾ ವೈ ಜೈಲೇ ||ಅಮರೆಕು||

೫. ದೆಮುಲ್ಲೂರ್ ಗುಡಿಗಿ ಜಯಲಂತ್ತು ದೆಮುಲ್ಲೂರ್ ಗುಡಿಗಿ ಜೈ ಲಂತ್ತು
ಮೆರವಣಿಗೆ ಕಡಲಂತ್ತು ಕೈನಿಘಗ್ಯೆ ಲಂತು, ಮಿಕೆ ಎರಕಾ ವೈ ಜೈಲೇ ತೋರು ಸಂಗಾ ವೈಜೈಲೇ
||ಅಮರೆಕು||

೬. ಹಂಟೋರ್ ಕೊಬುರೇ ಬಂಗಲಂತ್ತು, ಹಂಟೋರ್
ಕೊಬುರೇ ಬಂಗಲಂತ್ತು, ಕಾಳು ಲಗ್ಯೆಲಂತು
ವ್ಹಾಯೋ ಬಂಟಿಕೈಲಂತು ಮಿಕೆ ಎರಕಾ ವೈಜ್ವೆಲೇ
ತೊರು ಸಂಗ್ಯ ವೈಜ್ವೆಲೇ ||ಅಮರೆಕು||

(ನರಸಪ್ಪ ತಂದೆ ಮಹಾದೇವಪ್ಪ., ಬಂಜೋಡ್: ಹತ್ತಿಕುಣಿ)

ಭಾವಾರ್ಥ : ಬೈಲುಪತ್ತಾರರು ಮಾಡುವ ಮದುವೆಯ ಸಂದರ್ಭದಲ್ಲಿನ ವಿವಿಧ ಹಂತಗಳು ಈ ಹಾಡಿನಲ್ಲಿ ಪರಿಚಯಿಸಲಾಗುತ್ತದೆ. ಮೊದಲಿಗೆ ಹಾಡಿನ ಪಲ್ಲವಿಯಲ್ಲಿ ನಿಮ್ಮ ಮದುವೆಯ ಸಂಭ್ರಮ ನಮಗೆ ಬಹಳ ಸಂತೋಷವಾಯಿತು ಎಂದು ಹೇಳುವ ಮೂಲಕ ಪರಿಚಯಿಸಲಾಗುತ್ತದೆ. ಮೊದಲಿಗೆ ಮದುವೆ ದಿನ ಹಂದರ ಬ್ಯಾಟಿ ಮಾಡಲಾಯಿತು. ಆ ಬ್ಯಾಟಿ ಮಾಂಸವನ್ನು ಎಲ್ಲರೂ ಹಂಚಿಕೊಂಡೆವು. ಈ ಕಾರ್ಯಕ್ರಮ ಮುಗಿದ ಮೇಲೆ ಮಧುಮಗಳ ಮುಖಕ್ಕೆ ಮಧುಮಗ ಹೆಂಡ ಚಲ್ಲುತ್ತಾನೆ. ಹೆಂಡ ಚೆಲ್ಲಿದ ಮೇಲೆ ಅವಳ ಕೈ ಹಿಡಿದು ಬಳೆಗಾರನ ಕೈಗೆ ಕೊಡುತ್ತಾನೆ. ಆಗ ಆಕೆ ಹಸಿರು ಬಳೆ ಹಾಕಿಸಿ ಕೊಳ್ಳುತ್ತಾಳೆ. ನಂತರ ಮಧು ಮಕ್ಕಳಿಗೆ ಅರಿಷಿಣ ಹಚ್ಚಿಹಂದರದಲ್ಲಿ ನೀರು ಹಾಕಿ ಶ್ಯಾಸಿ ಕಟ್ಟೆಗೆ ಕರೆದುಕಂಡು ಬರುತ್ತಾರೆ. ಮಧುಮಗನ್ನು ಶ್ಯಾಸಿ ಕಟ್ಟೆಯ ಮೇಲೆ ಕುಳಿತಾಗ ಸಂಪ್ರದಾಯಿಕವಾಗಿ ಮಧುಮಗಳಿಗೆ ತಾಳಿ ಕಟ್ಟಲಾಗುತ್ತದೆ. ಕೊನೆಯಲ್ಲಿ ದೇವರಿಗೆ ಮೆರವಣಿಗೆ ಹೋಗಿ ಎಲ್ಲರೂ ಸಿಹಿ ಊಟ ಮಾಡಿದ ಮೇಲೆ ಉಡಿಯಲ್ಲಿ ಹಾಕಿದ ಕೊಬ್ರಿಗಳನ್ನು ಚಿಕ್ಕ ಚೂರುಗಳನ್ನಾಗು ಮಾಡಿ ಎಲ್ಲರು ಹಂಚಿಕೊಳ್ಳುವದರೊಂದಿಗೆ ಮದುವೆ ಕಾರ್ಯಮುಗಿಯುತ್ತದೆ. ಎನ್ನುವ ಅಂಶಗಳು ಈ ಹಾಡಿನಲ್ಲಿರುತ್ತದೆ.

### ೩.೪. ದೇವರು ದೇವತೆಗಳು ಸ್ತುತಿಗೀತೆಗಳು

ಇವರು ಹಬ್ಬಹರಿದಿನಗಳಲ್ಲಿ ದೇವರು ದೇವತೆಗಳ ಮುಂದೆ ಅನೇಕ ರೀತಿಯ ಆರತಿ, ಮಂಗಳಾರಾತಿ, ಗೀತೆಗಳು, ಗುರುಸ್ತುತಿ, ಭಕ್ತಿ, ಶ್ರದ್ಧೆ ದೈವಿ ಭಾವನೆಗಳಿಂದ ಕೂಡಿದ ಅನೇಕ ಹಾಡುಗಳನ್ನು ಹಾಡುತ್ತಾರೆ. ಇವುಗಳಿಗೆ ಧಾರ್ಮಿಕ ಗೀತೆಗಳು ಎಂದು ಕೂಡಾ ಕರೆಯಬಹುದು. ಇಲ್ಲಿ ಮಂಗಳಾರುತಿಗೆ ಸಂಬಂಧಿಸಿದ ಗೀತೆ ಹಾಗೂ ಅದರ ಸಾರಂಶ ಪರಿಶೀಲಿಸಬಹುದು.

**ಆರುತಿ ಗೀತೆ**

೧. ಕುಬ್ನುನೋರು ಆರುತಿ ಹತ್ಯೆಹಿ ನೀ ಕನ್ಹಾ
ಆರುತಿ ಗೊಡಲು ಮ್ಹಾ ಜೈ ಮಂಗಳಾರುತಿ
ಗೊಡಮೋ ಮ್ಹಾ

೨. ದೊಬ್ಬರು ಆರುತಿ ಅತ್ಯಹಿ ನೀ ಕನ್ನಾ
ಆರುತಿ ಗೊಡಲು ಮ್ಮಾ ಜೈ ಮಂಗಳಾರುತಿ
ಗೊಡಮೋ ಮ್ಮಾ

೩. ಮುಗುತ್ತೋರು ಆರುತಿ ಹತ್ಯೆಹಿ ನೀ ಕನ್ನಾ
ಆರುತಿ ಗೊಡಲು ಮ್ಮಾ ಜೈ ಮಂಗಳಾರುತಿ
ಗೊಡಮೋ ಮ್ಮಾ

೪. ಮಾಣಿಕ್ಯದಾರುತಿ ಹತ್ಯೆಹಿ ನೀ ಕನ್ನಾ
ಆರುತಿ ಗೊಡಲು ಮ್ಮಾ ಜೈ ಮಂಗಳಾರುತಿ
ಗೊಡಮೋ ಮ್ಮಾ

೫. ಪುಲೋರು ಆರುತಿ ಹತ್ಯಹಿ ನೀ ಕನ್ನಾ
ಆರುತಿ ಗೊಡಲು ಮ್ಮಾ ಜೈ ಮಂಗಳಾರುತಿ
ಗೊಡಮೋ ಮ್ಮಾ

ಭಾವಾರ್ಥ : ೧. ಬಂಗಾರದ ಆರುತಿ ಕೈಯಲ್ಲಿ ಹಿಡಕೊಂಡು
ಆರುತಿ ಬೆಳಗಿರೇ ದೇವಿಗೆ ಜೈ ಮಂಗಳದಾರುತಿ
ಬೆಳಗಿರೇ

೨. ಬೆಳ್ಳಿಯ ಆರುತಿ ಕೈಯಲ್ಲಿ ಹಿಡಕೊಂಡು
ಆರುತಿ ಬೆಳಗಿರೇ ದೇವಿಗೆ ಜೈ ಮಂಗಳದಾರುತಿ
ಬೆಳಗಿರೇ

೩. ಮುತ್ತಿನ ಆರುತಿ ಕೈಯಲ್ಲಿ ಹಿಡಕೊಂಡು
ಆರುತಿ ಬೆಳಗಿರೇ ದೇವಿಗೆ ಜೈ ಮಂಗಳದಾರುತಿ
ಬೆಳಗಿರೇ

೪. ಮಾಣಿಕ್ಯ ಅವಳದ ಆರುತಿ ಕೈಯಲ್ಲಿ ಹಿಡಕೊಂಡು
ಆರುತಿ ಬೆಳಗಿರೇ ದೇವಿಗೆ ಜೈ ಮಂಗಳದಾರುತಿ
ಬೆಳಗಿರೇ

೫. ಹೂವಿನ ಆರುತಿ ಕೈಯಲ್ಲಿ ಹಿಡಕೊಂಡು ಆರುತಿ
ಬೆಳಗಿರೇ ದೇವಿಗೆ ಜೈ ಮಂಗಳದಾರುತಿ ಬೆಳಗಿರೇ

(ನರಸಮ್ಮ ಗಂಡ ಯಂಕಪ್ಪ ಗೌಡ್ಕ ಗುಲ್ಬರ್ಗಾ)

ಈ ಹಾಡು ದೇವಿಗೆ ಪೂಜೆಸಲ್ಲಿಸುವಾಗ ಮತ್ತು ಕನ್ಯೆಯು ಋತುಮತಿಯಾದಗ ಅಥವಾ ಗಂಡನ ಮನೆಗೆ ಹೋಗುವಾಗ ಆರುತಿ ಬೆಳಗುವಾಗ ಹಾಡುತ್ತಾರೆ.

## ಆಧಾರಗಳು

1. Singh, K.S., Indias Communities (A-G)(Dehli : Oxford University Press, 1998) P.189
2. Iyer, L.K.A., Mysore Tribes and Castes (Delhi : Mithal Publications, 1998), Vol IV, P. 453

# ೬. ಬೈಲುಪತ್ತಾರರ ಸಮಸ್ಯೆಗಳು

ಸಾಮಾನ್ಯವಾಗಿ ಹಲವು ವ್ಯಕ್ತಿಗಳಿಗೆ ಏಕ ಕಾಲದಲ್ಲಿ, ಏಕ ಪ್ರಕಾರವಾಗಿ ಕಂಡುಬರುವ ಸಮಸ್ಯೆಗಳನ್ನು ಸಾಮಾಜಿಕ ಸಮಸ್ಯೆಗಳೆಂದು ಕರೆಯುಬಹುದು. ಅವು ಬಹಳಷ್ಟು ಜನರಿಗೆ ಕಂಡು ಬರುತ್ತಿರುವ ಸಮಸ್ಯೆಗಳಾಗಿರುವುದರಿಂದ, ಸಾಮಾಜಿಕ ಸಮಸ್ಯೆಗಳೆನಿಸುತ್ತವೆ. ಅಲ್ಲದೆ ಯಾವುದೇ ತೊಂದರೆಯು ನಿರಂತರವಾಗಿ ಕಾಡುತ್ತಿದ್ದು ಅದನ್ನು ಅನಿವಾರ್ಯವಾಗಿ ಅನುಭವಿಸುವಂತಹ ವಾತಾವರಣ ನಿರ್ಮಾಣವಾದರೆ, ಅದನ್ನು ಸಮಸ್ಯೆ ಎಂದು ಪರಿಗಣಿಸಬಹುದು.

ಸಮಸ್ಯೆಯು ಬಹುಮಟ್ಟಿಗೆ ಕಣ್ಣಿನಿಂದ ನೋಡಬಹುದು. ಆದರೆ ಕೈಯಿಂದ ಹಿಡಿಯುವುದು ಸಾಧ್ಯವಾಗುವದಿಲ್ಲ. ಆದರೆ ಅದರ ಇರುವಿಕೆಯನ್ನು ಸಾಮಾನ್ಯವಾಗಿ ಎರಡು ಮಾರ್ಗಗಳಿಂದ ಗುರುತಿಸಬಹುದು. ಮೊದನೆಯದಾಗಿ ಆ ಸಮಸ್ಯೆಯನ್ನು ನೇರವಾಗಿ ಅನುಭವಿಸುವವರೇ ಸ್ವತಃ ಅದರ ಬಗ್ಗೆ ತಿಳಿಯಪಡಿಸಿದ್ದಾಗ. ಎರಡನೆಯದಾಗಿ ತಜ್ಞರು ಅಥವಾ ಅಧ್ಯಾಯನಕಾರರು ಆ ಸಮಸ್ಯೆಯ ಹಲವಾರು ಲಕ್ಷಣಗಳು ಹಾಗೂ ಪರಿಣಾಮಗಳ ಆಧಾರದ ಹಿನ್ನೆಲೆಯ ಪರಿಸ್ಥಿತಿಗಳನ್ನು ತಿಳಿದುಕೊಂಡು ವಿವರಿಸಿದಾಗ ಇಲ್ಲಿ ಅಧ್ಯಯನಕಾರರು ಸಮಸ್ಯೆಗಳನ್ನು ಅರಿತುಕೊಳ್ಳಲು ಅವುಗಳನ್ನು ಅನುಭವಿಸುವುದ ರೊಂದಿಗೆ, ನಿಕಟವಾದ ಸಂಪರ್ಕಗಳು ಹೊಂದಿರಬೇಕಾದದ್ದು ತುಂಬಾ ಅಗತ್ಯವಾಗಿರುತ್ತದೆ. ಪ್ರಸ್ತುತವಾಗಿ ಬೈಲುಪತ್ತಾರ ಸಮುದಾಯವು ಕೂಡಾ ಇಂದಿನ ಆಧುನಿಕ ಜಗತ್ತಿನಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದು. ಅಧ್ಯಯನದ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

## ೧. ವಸತಿ ಸಮಸ್ಯೆ

ಮೂಲತಃ ಅಲೆಮಾರಿಗಳಾಗಿದ್ದ ಬೈಲುಪತ್ತಾರರು ನೆಲೆನಿಂತುಕೊಳ್ಳುತ್ತಿರುವ ಈ ಸಂದರ್ಭಗಳಲ್ಲಿ ವಾಸಿಸಲು ವಾಸದ ಮನೆಗಳಿಲ್ಲದೆ, ವಸತಿ ವಂಚಿತರಾಗಿದ್ದಾರೆ. ಆದರೂ ಕೂಡಾ ಇತ್ತೀಚಿನ ದಿನಗಳಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಬೈಲುಪತ್ತಾರರಿಗೆ, ಗಾಳಿ ಬೆಳಕು ಹೇರಳವಾಗಿ ಉಚಿತವಾಗಿ ಸಿಗುತ್ತಿದ್ದರೂ, ಆ ಪ್ರಕೃತಿಯ ಕೊಡುಗೆಯ ಸದುಪಯೋಗ ಸಿಗುತ್ತಿಲ್ಲಾ. ಇವರು ತಮ್ಮ ಸ್ವಂತಪ್ರಯತ್ನದಿಂದ ಗ್ರಾಮೀಣ ಪ್ರದೇಶಗಳಲ್ಲಿ, ಗುಡಿಸಲುಗಳಲ್ಲಿ ಮತ್ತು ಒಂದು ಅಥವಾ ಎರಡು ಕೋಣೆಗಳಿರುವ ಕತ್ತಲೆಯಿಂದ ಕೂಡಿದ ಇಕ್ಕಟ್ಟಾದ ಮನೆಗಳಲ್ಲಿಯೇ ವಾಸಿಸುತ್ತಿದ್ದಾರೆ. ಅವುಗಳಲ್ಲಿ ಇಡೀ ಕುಟುಂಬದ

ಎಲ್ಲಾ ಸದಸ್ಯರು ವಾಸವಾಗಿದ್ದು ಅವು ಕಿಕ್ಕಿರಿದ ಜನಸಂದಣಿಯಿಂದ ಕೂಡಿದ ವಸತಿ ನೆಲೆಗಳಾಗಿವೆ. ಆದ್ದರಿಂದ ಇವರಿಗೆ ವಾಸಕ್ಕೆ ಉತ್ತಮವಾದ ಮನೆಯನ್ನು ಕಟ್ಟಿಕೊಳ್ಳುವುದು, ಕನಸಾಗಬಹುದೇ ಹೊರತು ನನಸಾಗುವುದು ಬಹು ದಿನದ ಮಾತಾಗಿದೆ. ಇವರು ತಮ್ಮ ವಾಸದ ಮನೆಗಳ ಇತ್ತಲಿನಲ್ಲಿ ಇಲ್ಲವೇ ಅಂಗಗಳಲ್ಲಿ ತಡಿಕೆ ಅಥವಾ ತಟ್ಟುಗಳಿಂದ ಮಾಡಿದ ಬಚ್ಚಲಿನಲ್ಲಿ ಸ್ನಾನ ಮಾಡುತ್ತಾರೆ. ಮಕ್ಕಳು ಊರ ಹೊರಗಿನ ಬಾವಿ, ಹಳ್ಳಗಳಿಗೆ ಹೋಗಿ ಸ್ನಾನ ಮಾಡುತ್ತಾರೆ. ಸ್ತ್ರೀಯರು ಮನೆ ಬಳಕೆ ನೀರಿಗಾಗಿ, ಬಾವಿ, ಹಳ್ಳ, ಸಾರ್ವಜನಿಕ ನಲ್ಲಿಗಳಿಗೆ ಹೋಗಿ ನೀರು ತರುತ್ತಾರೆ. ಇವರು ಶೌಚಲಯಕ್ಕೆ ಸಾರ್ವಜನಿಕ ಶೌಚಾಲಯಗಳಿಗೆ ಇಲ್ಲವೆ ಹೊರಗಿನ ಬೈಲಿನಲ್ಲಿ, ತಿಪ್ಪೆಗುಂಡಿಗಳ ಪಕ್ಕದಲ್ಲಿ ಹೋಗುತ್ತಾರೆ.

ಇನ್ನೂ ನಗರ ಪ್ರದೇಶದ ಬೈಲುಪತ್ತಾರರಿಗಂತು ಕೊಳಚೆ ಪ್ರದೇಶಗಳು ಮತ್ತು ಸಾರ್ವಜನಿಕ ರಸ್ತೆಗಳೇ ಗತಿಯಾಗಿದ್ದು. ಈ ಕೊಳಚೆ ಪ್ರದೇಶಗಳಲ್ಲಿ ಸರಿಯಾದ ರಸ್ತೆಗಳಿರುವದಿಲ್ಲ, ಒಳಚರಂಡಿ ವ್ಯವಸ್ಥೆಗಳಿರುವುದಿಲ್ಲ, ಬೀದಿ ದೀಪಗಳಿರುವುದಿಲ್ಲ, ಸರಿಯಾದ ಸಾರ್ವಜನಿಕ ಶೌಚ ಗೃಹಗಳಿರುವುದಿಲ್ಲ, ಗುಡಿಸಲು ಮನೆಗಳೇ ತುಂಬಿರುತ್ತವೆ. ಸಾರ್ವಜನಿಕ ರಸ್ತೆಯಲ್ಲಿರುವವರಂತೂ ಗುಡಾರ ನಿವಾಸಿಗಳು. ಇವರಿಗೆ ನಗರಸಭೆ ಪುರಸಭೆಯವರ ಮತ್ತು ಪೋಲಿಸರ ಕಿರಿಕರಿ ಜೊತೆಗೆ ಸೊಳ್ಳೆ, ಹಂದಿ, ನಾಯಿಗಳ ಕಾಟವಂತು ಹೇಳತಿರದು. ಇವರಿಗೆ ಅಂಗಳವೇ ಅಡಿಗೆ ಮನೆ, ಇನ್ನೂ ಗಾಳಿ ಧೂಳು, ಮಳೆ ಬಂದಾಗ ಉಪವಾಸವೇ ಇವರಿಗೆ ಸಂಪ್ರದಾಯಿಕವಾಗಿ ಮುಂದುವರೆದ ಜನರು ಮಾಡುವ "ಒಪ್ಪತ್ತು ಊಟ"ವಾಗಿ ಪರಿಣಮಿಸುತ್ತದೆ. ದಂಪತಿಗಳು, ವಯಸ್ಸಾದ ಮುದುಕರು, ಯುವಕ, ಯುವತಿಯರಾದ ಮಕ್ಕಳೂ, ಒಂದೇ ಗುಡಾರ ಅಥವಾ ಗುಡಿಸಿಲಿನಲ್ಲಿ ಮಲಗಬೇಕಾಗುತ್ತದೆ. ಪ್ರತ್ಯೇಕತೆಗೆ ಅವಕಾಶವಿರುವುದಿಲ್ಲ.

ಬೈಲುಪತ್ತಾರರ ೧೮೭ ಕುಟುಂಬಗಳಲ್ಲಿ ೪೯ ಕುಟುಂಬಗಳು ಗುಡಾರಗಳಲ್ಲಿ, ೨೦ ಕುಟುಂಬಗಳು ಗುಡಿಸಲುಗಳಲ್ಲಿ, ೨೧ ಕುಟುಂಬಗಳು ಟಿನ್ ಮನೆಗಳಲ್ಲಿ, ೩೪ ಕುಟುಂಬಗಳು ಸಣ್ಣ ಮಾಳಿಗೆ ಮನೆಗಳಲ್ಲಿ, ೬ ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ, ೩ ಕುಟುಂಬಗಳು ಹೆಂಚಿನ ಮನೆಗಳಲ್ಲಿ, ಸರ್ಕಾರಿ ಆಶ್ರಯ ಮನೆಗಳಲ್ಲಿ ೩೮ ಕುಟುಂಬಗಳು ಹಾಗೂ ೧೬ ಕುಟುಂಬಗಳು ಬಾಡಿಗೆ ಮನೆಯಲ್ಲಿ ವಾಸವಾಗಿವೆ. ಬಹುಸಂಖ್ಯಾತ ಕುಟುಂಬಗಳು ನಿವೇಶನ ಹಾಗೂ ಮನೆಗಳನ್ನು ಹೊಂದದೆ ನಿರಶ್ರಿತವಾಗಿವೆ.

**೨. ಶೈಕ್ಷಣಿಕ ಸಮಸ್ಯೆ**

ಜಗತ್ತಿನ ಜೀವರಾಶಿಗಳಲ್ಲಿ ಅಕ್ಷರಸ್ಥನಾಗಲು ಸಾಮರ್ಥ್ಯಗಳನ್ನು ಹೊಂದಿರುವ ಏಕೈಕ ಜೀವಿ ಮಾನವ ಎನ್ನಬಹುದು. "ವಿದ್ಯಾವಿಹೀನ ಪಶು:" ಅಂದರೆ ವಿದ್ಯೆ ಇಲ್ಲದವನು 'ಪಶುವಿಗೆ ಸಮಾನ' ಅಲ್ಲದೆ "ನಹೀ ಜ್ಞಾನೇನ ಸದೃಶಂ" ಎಂದರೆ 'ಜ್ಞಾನಕ್ಕೆ ಸಮಾನವಾದದು ಯಾವುದೂ ಇಲ್ಲ' ಎಂಬ ಸಂಸ್ಕೃತ ಉಕ್ತಿಗಳು ತುಂಬಾ ಅರ್ಥ ಪೂರ್ಣವಾದವುಗಳಾಗಿವೆ.

ಅನಕ್ಷರತೆಯು ಓದಲು ಹಾಗೂ ಬರೆಯಲು ಬಾರದಿರುವುದನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಕೈ ಬರಹದ ಅಥವಾ ಮುದ್ರಿತವಾದಂತಹ ವಿಷಯಗಳನ್ನು ಓದಲು ಹಾಗೂ ಬರೆಯಲು ಬಾರದಿರುವುದನ್ನು

ಅನಕ್ಷರತೆ ಎಂದು ಕರೆಯಲಾಗುತ್ತದೆ. ಇಂತಹ ಅನಕ್ಷರತೆಯ ಪ್ರಮಾಣವು ಬೈಲುಪತ್ತಾರ ಸಮುದಾಯದಲ್ಲಿ ಹೆಚ್ಚಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಅಲ್ಲದೆ ಇವರು ಮೂಲತಃ ಅಲೆಮಾರಿಗಳಾಗಿರುವುದರಿಂದ ಶಿಕ್ಷಣದಿಂದ ವಂಚಿತರಾಗಿದ್ದಾರೆ ಎಂದು ಹೇಳಬಹುದು. ಇವರಲ್ಲಿ ವಿದ್ಯಾವಂತರ ಸಂಖ್ಯೆ ತೀರಾ ಕಡಿಮೆಯಾಗಿರುವುದರಿಂದ ಶೈಕ್ಷಣಿಕ ಪ್ರಗತಿಗೆ ನಿರಾಶಾದಾಯಕ ಮನೋಭಾವನೆಯ ಉತ್ತರ ಬರುತ್ತದೆ.

ಇವರು ತಮ್ಮ ದಿನನಿತ್ಯದ ಹೊಟ್ಟೆಪಾಡಿಗಾಗಿ ಮಕ್ಕಳ ದುಡಿಮೆಯ ಮೇಲೆಯೂ ಸಹ ಅವಲಂಬಿತರಾಗಿರುವುದರಿಂದ ತಮ್ಮ ಮಕ್ಕಳನ್ನೆ ಶಾಲೆಗೆ ಕಳುಹಿಸಲು ಉತ್ಸಾಹ ತೋರಿಸುವುದಿಲ್ಲ. ಅಲ್ಲದೆ ಈ ಸಮುದಾಯದ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗೆ ಸರಕಾರವು ಯಾವುದೇ ರೀತಿಯ ನೇರವು ಮತ್ತು ಅವಕಾಶಗಳನ್ನು ಕಲ್ಪಿಸಿಲ್ಲ. ಓದುವ ಹಂಬಲ ಮಕ್ಕಳಲ್ಲಿರಬಹುದು, ಆದರೆ ಕಲಿಸುವ ಸಾಮರ್ಥ ಪಾಲಕರಲ್ಲಿರುವುದಿಲ್ಲ. ಏಕೆಂದರೆ ಪ್ರಾಥಮಿಕ ಶಿಕ್ಷಣ ಹೇಗಾದರೂ ಮಾಡಿ ಕಲಿಸಬಹುದು ಸಾರ್, ಮುಂದಿನ ಶಿಕ್ಷಣಕ್ಕೆ ಶಾಲೆಯ ಫಿಜು, ಬಟ್ಟೆ, ಊಟದ ವ್ಯವಸ್ಥೆಗಳನ್ನು ಮಾಡುವುದು ನಮ್ಮಿಂದ ಸಾಧ್ಯವಾಗದ ಮಾತು ಎನ್ನುವ ನಿರುತ್ಸಾಹದ ಉತ್ತರ ಸಮುದಾಯದ ಪಾಲಕರಿಂದ ಬರುತ್ತದೆ. ನಮ್ಮ ಪಾಡಿಗೆ ನಾವು, ನಮ್ಮ ಮಕ್ಕಳಿಗೆ ನಮ್ಮ ವೃತ್ತಿಕಲಿಸಿ ಕೊಟ್ಟರೆ ಅಷ್ಟೂ-ಇಷ್ಟೂ ಜೀವನ ಮಾಡಲು ಅನುಕೂಲವಾಗುತ್ತದೆ ಎಂದು ಸಮುದಾಯದ ಪಾಲಕರು ಹೇಳುತ್ತಾರೆ.

ಹೀಗಾಗಿ ಸದಾ ಜಂಜಾಟದ ಬದುಕು, ನಿರಕ್ಷರಿತನದ ಜೀವನ, ದಿನದಿಂದ ದಿನಕ್ಕೆ ಇವರನ್ನು ಕಿತ್ತು ತಿನ್ನುತ್ತಿರುವ ಬಡತನಗಳು, ರಾಜಕೀಯ ಅಧಿಕಾರಗಳಲ್ಲದಿರುವುದು ಇವರ ಶಿಕ್ಷಣಕ್ಕೆ ಪ್ರೋತ್ಸಾಹ ಸಿಗುತ್ತಿಲ್ಲಾ ಎಂದು ಹೇಳಬಹುದು.

ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರಲ್ಲಿ ಬಹುಸಂಖ್ಯಾತರು ನಿರಕ್ಷರಿಗಳು. ಇವರ ಒಟ್ಟು ಜನಸಂಖ್ಯೆಯಲ್ಲಿ ೧,೧೦೪ ಜನ ಸಾಕ್ಷರರರ್ಹರಾಗಿದ್ದು ಇವರಲ್ಲಿ ಕೇವಲ ೨೫೫ ಜನ ಹೆಸರಿಗೆ ಮಾತ್ರ ಸಾಕ್ಷರರು ಕೇವಲ ೨೨ ಜನ ಪುರುಷರು ಮಾತ್ರ ಪ್ರೌಢಶಿಕ್ಷಣವನ್ನು ಮುಗಿಸಿರುವವರು. ಇವರಲ್ಲಿ ಸ್ತ್ರೀಯರಿಗೆ ಶಿಕ್ಷಣ ನೀಡುತ್ತಿಲ್ಲ. ಈ ತರಹದ ಶಿಕ್ಷಣಕ್ಕೆ ಹಲವಾರು ಕಾರಣಗಳು ಕೆಳಗಿನಂತಿವೆ.

**ಶೈಕ್ಷಣಿಕ ಕೊರತೆಗೆ ಕಾರಣಗಳು**

೧. ಸಮುದಾಯದಲ್ಲಿನ ಬಡತನ

೨. ಸಮುದಾಯ ನೆಲೆಸಿರುವ ಪರಿಸರಗಳು ಅಥವಾ ವಾತಾವರಣಗಳು

೩. ಪ್ರೋತ್ಸಾಹಗಳಿಲ್ಲದಿರುವುದು

೪. ಸರಕಾರಿ ಸೌಲಭ್ಯಗಳ ಕೊರತೆ

೫. ಇಂತಹ ಸಮುದಾಯಗಳು ಮಕ್ಕಳಿಗೆ ಶಾಲೆಗಳಲ್ಲಿನ ಬೋಧನೆಯ ಕೊರತೆ

೬. ಮಿಸಲಾತಿ ಕೊರತೆ

೭. ಶಾಲೆಗಳಿಗೆ ಹೋಗುವ ಮಕ್ಕಳಿಗೆ ಮನೆಯಲ್ಲಿ ಪಾಠ ಹೇಳಿ ಕೊಡುವ ಸಾಮರ್ಥ್ಯವಿಲ್ಲದಿರುವುದು

೮. ಶಾಲೆಗಳ ಕೊರತೆ

೩. ಮೀಸಲಾತಿಯ ಸಮಸ್ಯೆ

ದೈನಂದಿನ ಹೊಟ್ಟೆಪಾಡಿಗಾಗಿ ಬಡತನದಲ್ಲಿ ನೊಂದು ಬಳಲುತ್ತಿರುವ, ಶಿಕ್ಷಣದಿಂದ ವಂಚಿತರಾಗಿ ರಾಜಕೀಯ ಅಧಿಕಾರದಿಂದ ಬಹುದೂರ ಉಳಿದಿರುವ ಈ ಸಮುದಾಯವು ಮೀಸಲಾತಿಯ ಸಮಸ್ಯೆಯನ್ನು ಎದುರಿಸುತ್ತಿದೆ.

ಪ್ರಖ್ಯಾತ ಸಮಾಜಶಾಸ್ತ್ರಜ್ಞರಾದ ಡಾ. ಡಿ.ಎನ್. ಮುಜಂದಾರ್‌ರವರು "ಒಂದೇ ಹೆಸರನ್ನು ಹೊಂದಿರುವ ಒಂದೇ ಭೂ ಪ್ರದೇಶದಲ್ಲಿ ವಾಸಿಸುವ ಒಂದೇ ಭಾಷೆಯನ್ನಾಡುವ, ಒಳಬಾಂಧವ್ಯ ವಿವಾಹ ಹೊಂದಿರುವ, ವಿಶಿಷ್ಟ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಕಾಪಾಡಿಕೊಂಡು ಬಂದಿರುವ ಕುಟುಂಬಗಳ ಸಮೂಹಗಳನ್ನು ಆದಿವಾಸಿ ಸಮೂಹಗಳು" ಎಂದು ಕರೆದಿದ್ದಾರೆ. ಈ ವ್ಯಾಖ್ಯಾಗೆ ಪೂರಕವಾಗುವ ಮಾದರಿಯಲ್ಲಿಯೇ ಅನೇಕ ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ವ್ಯಾಖ್ಯಾನಗಳನ್ನು ನೀಡಿದ್ದಾರೆ. ಈ ಮೇಲಿನ ವ್ಯಾಖ್ಯೆಯ ಅರ್ಥದ ಹಿನ್ನೆಲೆಯ ಲಕ್ಷಣಗಳನ್ನು ಹೊಂದಿರುವ ಈ ಸಮುದಾಯವೂ 'ಪರಿಶಿಷ್ಟ' ಪಂಗಡದ ಸೌಲಭ್ಯಗಳ ಮೀಸಲಾತಿಯಿಂದ ವಂಚಿತವಾಗಿರುವುದು ಗೋಚರಿಸುತ್ತದೆ. ಅಲ್ಲದೆ ಆಧುನಿಕ ಕೈಗಾರಿಕರಣದಿಂದ ತಯಾರಾದ ಅನೇಕ ರೀತಿಯ ಸಿದ್ಧ ಆಭರಣಗಳು ಜನರಲ್ ಸ್ಟೋರ್‌ಗಳಲ್ಲಿ, ಲೇಡಿಸ್ ಕಾರ್ನರ್‌ಗಳಲ್ಲಿ ಮಾರಾಟ ವಾಗುತ್ತಿರುವುದರಿಂದ ಇವರು ದಿನವಿಡೀ ಶ್ರಮವಹಿಸಿ ತಯಾರಿಸಿದ ಆಭರಣಗಳು ಮಾರುಕಟ್ಟೆಯಲ್ಲಿ ಪೈಪೋಟಿ ಸಾಧಿಸಿ ಸೋಲು ಅನುಭವಿಸುತ್ತಿವೆ. ಹೀಗಾಗಿ ಇವರು ತಯಾರಿಸಿದ ಆಭರಣಗಳನ್ನು ಮಾರಾಟ ಮಾಡಿ ಜೀವನ ನಡೆಸುವುದು ತುಂಬಾ ಕಷ್ಟವಾಗಿ ನಿರುದ್ಯೋಗಿಗಳಾಗುತ್ತಿರುವ ಈ ಸಂದರ್ಭದಲ್ಲಿ ಸರ್ಕಾರವು ಈ ಸಮುದಾಯಕ್ಕೆ ಅಥವಾ ಇಂತಹ ಸಮುದಾಯಗಳಿಗೆ ವಿಶೇಷ ಮೀಸಲಾತಿ ಅವಕಾಶ ಕಲ್ಪಿಸಿಕೊಡುವುದು ಅನಿವಾರ್ಯವಾಗಿದೆ. ಅನೇಕ ಬುಡಕಟ್ಟುಗಳು ಪೂರ್ಣ ಪ್ರಮಾಣದಲ್ಲಿ ಬೆಳಕಿಗೆ ಬಾರದೆ ಸಮಾಜದ ಪರಿಚಯವನ್ನು ಪಡೆಯದೆ ಉಳಿದುಕೊಂಡು ಬಿಟ್ಟಿರುವುದರಿಂದ ಸರಕಾರದ ಮಾರ್ಗದರ್ಶನದಲ್ಲಿ, ಅಧಿಕಾರಿಗಳು, ಸಂಶೋಧಕರು, ಅಧ್ಯಯನಕಾರರು, ಸಂಘ-ಸಂಸ್ಥೆಗಳು ಈ ದಿಸೆಯಲ್ಲಿ ನಿಖರತೆಯನ್ನು ವ್ಯಕ್ತಪಡಿಸುವುದು ಅಗತ್ಯವಾಗಿದೆ.

ಒಂದು ವೇಳೆ ಸರಕಾರವು ಇಂತಹ ಸಮುದಾಯಗಳಿಗೆ 'ಮೀಸಲಾತಿ'ಯ ಅವಕಾಶ ಕಲ್ಪಿಸದಿದ್ದರೆ, ಇಂತಹ ಸಮುದಾಯಗಳು ಮುಂದಿನ ದಿನಗಳಲ್ಲಿ "Criminal Tribes" ಗಳಾಗುವುದಕ್ಕೆ ಸರ್ಕಾರವೇ ಪ್ರಚೋದಿಸಿದಂತಾಗುತ್ತದೆ.

ಈ ಹಿನ್ನೆಲೆಯಲ್ಲಿ ಇಂತಹ ಸಮುದಾಯಗಳು ಇನ್ನಷ್ಟು ಹೀನಾಯ ಸ್ಥಿತಿಗೆ ಹೋಗುವುದಕ್ಕಿಂತ ಮೊದಲು ಸರ್ಕಾರವು ಇಂತಹ ಸಮುದಾಯಗಳ ಅಭಿವೃದ್ಧಿ ಮತ್ತು ಮೀಸಲಾತಿಗೆ ಅವಕಾಶ ಮಾಡಿಕೊಡಬೇಕಾಗಿರುವುದು ತುಂಬಾ ಅಗತ್ಯವಾಗಿದೆ.

**೪. ಸಮುದಾಯದ 'ಸಂಘ'ಗಳಿಲ್ಲದಿರುವುದು**

ಬೈಲುಪತ್ತಾರರು ಮಾನಸಿಕವಾಗಿ ಸಮುದಾಯದ ನಾವೆಲ್ಲರೂ ಒಂದೇ ಎಂಬ ಭಾವನೆ ತುಂಬಾ ಎದ್ದು ಕಾಣುತ್ತದೆ. ಅವರು ಅಲೆಮಾರಿಗಳಾಗಿದ್ದರೂ ಸಹ ಸಾಕಷ್ಟು ಪ್ರಮಾಣದ ಏಕತೆ ಮತ್ತು ಸಮೂಹ ಭಾವನೆಯನ್ನು ಹೊಂದಿದ್ದಾರೆ. ಆದರೆ ಇಡೀ ಗುಲ್ಬರ್ಗಾ ಜಿಲ್ಲಾ ವ್ಯಾಪ್ತಿಯಲ್ಲಿ ಈ ಸಮುದಾಯದವರು ತಮ್ಮ ಸಮುದಾಯದ ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಲು ಒಂದು 'ಸಂಘ'ಗಳನ್ನು ಕೂಡ ರಚನೆ ಮಾಡಿಕೊಂಡಿಲ್ಲ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಯಾವಾಗಲೂ ಬಡತನ, ನಿರಕ್ಷರಿತನಗಳಿಂದ ಜೀವನ ನಡೆಸುತ್ತಿರುವ ಇವರು 'ಸಂಘಗಳ' ಸ್ಥಾಪನೆಯ ಕಡೆಗೆ ಮೊರೆಹೊಗಿಲ್ಲದಿರುವುದು. ಆಧುನಿಕ ಜಗತ್ತಿನಲ್ಲಿ 'ಆಮೆ' ವೇಗದಲ್ಲಿ ಚಲಿಸುತ್ತಿರುವುದು ಕಂಡು ಬರುತ್ತದೆ.

ಇಂದಿನ ಆಧುನಿಕ ಜಗತ್ತಿನ ಸ್ಥಿತ್ಯಾಂತರಗಳ ಬದುಕಿನಲ್ಲಿ ಸಮುದಾಯವು ಸಂಘಟನಾತ್ಮಕ ಹೋರಾಟ ಮಾಡಿದಾಗ, ಈ ಸಮುದಾಯದವರ ಕಷ್ಟ ಸರ್ಕಾರದ ಗಮನಕ್ಕೆ ಅಲ್ಪ ಪ್ರಮಾಣದಲ್ಲಾದರೂ ಬರಬಹುದು. ಈ ಹಿನ್ನೆಲೆಯಲ್ಲಿ ಸಮುದಾಯವೇ ಎಚ್ಚೆತ್ತುಕೊಳ್ಳಬೇಕಾಗಿದೆ. ಅನೇಕ ಅಲಕ್ಷಿಸಲ್ಪಟ್ಟ ಸಮುದಾಯಗಳು ಸಂಘಟನಾತ್ಮಕ ಮನೋಭಾವನೆಗಳನ್ನು ಅರಿತುಕೊಂಡು ಹೋರಾಟ ಮಾಡಿ "ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ" ಮೀಸಲಾತಿ ಪಟ್ಟಿಯಲ್ಲಿ ಸೇರಿಕೊಂಡಿವೆ. ಹೀಗಾಗಿ ಸದ್ಯ ಇವರು ತಮ್ಮ ಮಕ್ಕಳ ಉಚಿತ ಶಿಕ್ಷಣದ ಅಭಿವೃದ್ಧಿಯ ಹಿನ್ನೆಲೆಯಲ್ಲಿಯಾದರೂ ಮೀಸಲಾತಿಗಾಗಿ ಹೋರಾಟ ಮಾಡಬೇಕಾಗಿದೆ.

**ಸಮುದಾಯದ ಅಭಿವೃದ್ಧಿಗೆ ಪರಿಹಾರೋಪಾಯಗಳು**

**೧. ವಸತಿ ಸೌಲಭ್ಯಗಳು**

ಬೈಲುಪತ್ತಾರರು ಮೂಲತಃ ಅಲೆಮಾರಿಗಳಾಗಿ ವಸತಿ ವಂಚಿತರಾಗಿ, ನೆಲೆನಿಂತುಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಗುಡಿಸಲು, ಗುಡಾರ ನಿವಾಸಿಗಳಾಗಿರುವುದರಿಂದ ಇವರಿಗೆ

ಅ. ಉಚಿತ ನಿವೇಶನಗಳ ಹಂಚಿಕೆಯಾಗಬೇಕು

ಆ. ಜನತಾ ಮನೆಗಳನ್ನು ಕಟ್ಟಿಸಿಕೊಡುವ ಯೋಜನೆಯಾಗಬೇಕು

ಇ. ಮನೆ ಕಟ್ಟಿಸಿಕೊಳ್ಳಲು, ಖರೀದಿ ಮಾಡಲು ಹಾಗೂ ಮನೆಗಳ ರಿಪೇರಿ ಕೆಲಸಕ್ಕೆ ರಿಯಾಯಿತಿ ದರದಲ್ಲಿ ಸಾಲ ಹಾಗೂ ಸಹಾಯ ಧನವನ್ನು ನೀಡುವ ಯೋಜನೆ ಜಾರಿಗೊಳ್ಳಬೇಕು.

ಈ. ಇವರ ಮನೆಗಳಿಗೆ ಉಚಿತವಾಗಿ ವಿದ್ಯುತ್, ನೀರಿನ ಕೊಳಾಯಿ ಹಾಗೂ ಪಡಿತರ ಚೀಟಿ ವ್ಯವಸ್ಥೆಗಳು ಕೊಡಬೇಕು.

**೨. ಶೈಕ್ಷಣಿಕ ಸೌಲಭ್ಯಗಳು**

ಇವರ ಶಿಕ್ಷಣ ಅಭಿವೃದ್ಧಿಗೆ 'ಪರಿಶಿಷ್ಟ' ಪಂಗಡದ ಮಕ್ಕಳಿಗೆ ಸಿಗುವಂತಹ ಎಲ್ಲಾ ಸೌಲಭ್ಯಗಳು ನೀಡಬೇಕು.

ಅ. ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕಗಳು, ವಿದ್ಯಾರ್ಥಿನಿಲಯಗಳಲ್ಲಿ ಅವಕಾಶ, ವಿದ್ಯಾರ್ಥಿ ವೇತನ ಇಂತಹ ಎಲ್ಲಾ ಸೌಲಭ್ಯಗಳು ನೀಡಬೇಕು

ಆ. 'ಆಶ್ರಮ ಮಾದರಿಯ' ಶಾಲೆಗಳಲ್ಲಿ ಅವಕಾಶ ಕೊಡಬೇಕು

ಇ. ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಸೂಕ್ತವಾದ ಸಲಹೆಗಳು ನೀಡುವ ಪ್ರಯತ್ನವಾಗಬೇಕು

ಈ. ತಾಂತ್ರಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣಗಳಿಗೆ ಪ್ರೋತ್ಸಾಹ ಕೊಡಬೇಕು

ಉ. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ವಿಶೇಷ ತರಬೇತಿ ಮತ್ತು ಸೌಲಭ್ಯಗಳು ನೀಡಬೇಕು

**೩. ಆರ್ಥಿಕ ಸೌಲಭ್ಯಗಳು**

ಬೈಲುಪತ್ತಾರರ ಆರ್ಥಿಕ ಸ್ಥಿತಿಯು ಅತ್ಯಂತ ಚಿಂತಾಜನಕವಾಗಿರುವುದರಿಂದ ಇವರ ಆರ್ಥಿಕ ಅಭಿವೃದ್ಧಿಗೆ ಸರ್ಕಾರವು ಹಲವಾರು ಯೋಜನೆಗಳು ರೂಪಿಸಬೇಕು.

ಅ. ಇವರ ವೃತ್ತಿ ಸಲಕರಣೆಗಳ ಖರೀದಿಗೆ ಸೌಲಭ್ಯಗಳು ಹಾಗೂ ಪ್ರೋತ್ಸಾಹಗಳು ನೀಡಬೇಕು

ಆ. ನಗರದ ಮುಖ್ಯ ವ್ಯಾಪಾರಿ ಕೇಂದ್ರಗಳಲ್ಲಿ ಇವರಿಗೆ ಸಾಲು ವ್ಯಾಪಾರಿ ಮಳಿಗೆಗಳು ಕಟ್ಟಿಸಿಕೊಡಬೇಕು

ಇ. ಇವರು ವಿವಿಧ ಪ್ರದೇಶಗಳಿಗೆ ಹೋಗಿ ತಾವು ತಯಾರಿಸಿದ ಆಭರಣಗಳನ್ನು ಮಾರಾಟ ಮಾಡಲು ಉಚಿತ ಬಸ್, ರೈಲ್ವೆ ಪಾಸುಗಳ ವ್ಯವಸ್ಥೆಯಾಗಬೇಕು

ಈ. ಇವರಿಗೆ ಪೋಲಿಸರ ಕಿರಿ ಕಿರಿಯಿಂದ ಮುಕ್ತಗೊಳಿಸಲು ಗುರುತ್ತಿನ ಚೀಟಿ ನೀಡುವ ವ್ಯವಸ್ಥೆಯಾಗಬೇಕು.

**೪. ಮೀಸಲಾತಿ ಸೌಲಭ್ಯ**

ಬೈಲುಪತ್ತಾರ ಸಮುದಾಯವು ಅಲೆಮಾರಿ ಜೀವನ ನಡೆಸುವುದರೊಂದಿಗೆ ತನ್ನ ಅಂತರಾಳದಲ್ಲಿ ಇಂದಿಗೂ ಜೀವಂತವಾಗಿ ತನ್ನದೆಯಾದಂತಹ, ಲಿಪಿ ಇಲ್ಲದ ವಿಶಿಷ್ಠ ಭಾಷೆ ಮತ್ತು ಸಂಸ್ಕೃತಿಗಳನ್ನು ಹೊಂದಿದ್ದು ಒಂದು ಬುಡಕಟ್ಟು ಸಮುದಾಯ ಎನಿಸಿಕೊಳ್ಳುತ್ತದೆ. ಹಿಗಿದ್ದು ಕೂಡ ಈ ಸಮುದಾಯವು

'ಪರಿಶಿಷ್ಟ ಪಂಗಡ'ದ ಮೀಸಲಾತಿಯಿಂದ ವಂಚಿತವಾಗಿರುವುದರಿಂದ 'ಪರಿಶಿಷ್ಟ ಪಂಗಡ'ದ ಮೀಸಲಾತಿ ನೀಡಬೇಕಾದದ್ದು ಸರ್ಕಾರದ ಮುಖ್ಯ ಕೆಲಸವಾಗಿದೆ. ಈ ಮೀಸಲಾತಿಯ ಹಿನ್ನೆಲೆಯಲ್ಲಿ ಈ ಕೆಳಗಿನ ಸೌಲಭ್ಯಗಳು ನೀಡಬೇಕಾಗಿದೆ.

೧. ಶೈಕ್ಷಣಿಕ ಮೀಸಲಾತಿ ನೀಡುವುದು

೨. ರಾಜಕೀಯದಿಂದ ಬಹುದೂರ ಉಳಿದಿರುವುದರಿಂದ ರಾಜಕೀಯ ಕ್ಷೇತ್ರದಲ್ಲಿ ಮೀಸಲಾತಿ ನೀಡುವುದು

೩. ಉದ್ಯೋಗಾವಕಾಶಗಳಲ್ಲಿ ಮೀಸಲಾತಿ ನೀಡುವುದು

## ಆಧಾರಗಳು

ಸರಗಣಾಚಾರಿ, ಎಸ್.ಎಸ್., *ಭಾರತೀಯ ಸಮಾಜ ಅಧ್ಯಯನ* (ಬಾಗಲಕೊಟ:ಜಯಶ್ರೀ ಪ್ರಕಾಶನ, ೧೯೯೯), ಪು: ೧೧

# ೭. ಸಮಾರೋಪ

"ಸಮಾಜ ಶಾಸ್ತ್ರೀಯ ಅಧ್ಯಯನಗಳಿಗೆ ಇಡೀ ಪ್ರಪಂಚವೇ ಪ್ರಯೋಗಶಾಲೆ ಇದ್ದಂತೆ" ಎಂಬುದು ಅನೇಕ ಸಮಾಜಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಸಮಾಜವು ನಿತ್ಯ ಪರಿವರ್ತನಶೀಲವಾಗಿರುವುದರಿಂದ ಅದು ದಿನದಿಂದ ದಿನಕ್ಕೆ ತನ್ನ ವ್ಯಾಪ್ತಿಯನ್ನು ಹೆಚ್ಚಿಸುತ್ತಾ, ಅನೇಕ ಭಾಗ ವಿಭಾಗಗಳನ್ನಾಗಿ ಮಾಡಿ ಅಧ್ಯಯನ ಮಾಡುತ್ತಲೇ ಬಂದಿದೆ.

ಪ್ರಸ್ತುತ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನವನ್ನು ಸಮಾಜಶಾಸ್ತ್ರೀಯ ಅಧ್ಯಯನದ ಪರಿದಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಯಾವುದೇ ಒಂದು ಸಮಾಜಶಾಸ್ತ್ರೀಯ ಅಧ್ಯಯನಕ್ಕೆ ನಿಖರತೆ ಬರಬೇಕಾದರೆ ಅದಕ್ಕೆ ನಿಗದಿಪಡಿಸಿಕೊಂಡ ಸೀಮಿತವಾದ ಪ್ರದೇಶ ಇರಬೇಕಾದದ್ದು ತುಂಬಾ ಅಗತ್ಯವಾಗಿರುತ್ತದೆ. ಹೀಗಾಗಿ ಈ ಅಧ್ಯಯನವು ಗುಲ್ಬರ್ಗಾ ಜಿಲ್ಲೆ ಒಳಗೊಂಡಂತೆ ಸಮುದಾಯ ನೆಲೆಸಿರುವ ತಾಲೂಕುಗಳ ಮತ್ತು ಗ್ರಾಮಗಳನ್ನು ಗುರುತಿಸಿಕೊಂಡು ಅಧ್ಯಯದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಆರು ಅಧ್ಯಾಯಗಳು ಒಳಗೊಂಡಿರುವ ಈ ನಿಬಂಧವು ಒಂದೊಂದು ಅಧ್ಯಾಯದಲ್ಲಿ ಅದರ ವ್ಯಾಪ್ತಿಗೆ ಸಂಬಂಧಿಸಿದ ವಿಷಯದ ಪದರುಗಳನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

ಮೊದಲಿಗೆ ಅಧ್ಯಾಯನದ ಮಹತ್ವ ಮತ್ತು ಉದ್ದೇಶಗಳನ್ನು ಖಚಿತವಾಗಿ ಹೇಳುವುದರೊಂದಿಗೆ ಮುನ್ನಡೆಯುವ ಅಧ್ಯಾಯನವು ಆ ಸಮುದಾಯದ ಸಾಮಾಜಿಕ, ಕೌಟುಂಬಿಕ, ಆರ್ಥಿಕ ಜೀವನದ ವಿಧಾನಗಳ ಬಗ್ಗೆ ನಿಖರತೆಯನ್ನು ಕಂಡುಕೊಳ್ಳುವುದರೊಂದಿಗೆ ಅವರ ಜೀವನದ ಹುಟ್ಟು ಸಾವಿನವರೆಗೆ ನಡೆಯುವ ಜೀವನಾವರ್ತನ ಆಚರಣೆಗಳಾದ ಹುಟ್ಟು, ಮುಟ್ಟು, ನಾಮಕರಣ, ಮುಂಜಿ, ಮದುವೆ, ಶವಸಂಸ್ಕಾರ ಪದ್ಧತಿಗಳು ಹಬ್ಬಹರಿದಿನಗಳು ಇವರು ನಂಬಿರುವ ದೈವಗಳು, ಕುಲ ಪಂಚಾಯ್ತಿಗಳ ಅಧ್ಯಯನವನ್ನು ಕಂಡುಕೊಳ್ಳಲಾಗಿದೆ.

ಒಂದು ಸಮುದಾಯದ ಜೀವನ ವಿಧಾನವೇ ಆ ಸಮುದಾಯದ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ಅಂದರೆ, ಆ ಜನ ಸಮುದಾಯದ ಬದುಕಿನ ರೀತಿ-ನೀತಿಗಳು, ಆಚಾರ-ವಿಚಾರಗಳು, ರೂಢಿ-ಸಂಪ್ರದಾಯಗಳು ನೈತಿಕ-ನಿಯಮಗಳು ಆ ಸಮುದಾಯದ ಬದುಕು ವಿಕಾಸಗೊಳ್ಳುವಲ್ಲಿ ಬಹಳ ಮುಖ್ಯಪಾತ್ರವಹಿಸುತ್ತವೆ.

ಸ್ತ್ರೀ ಶಕ್ತಿ ದೈವಗಳ ಆರಾಧಕರಾದ ಇವರು ತಾವು ನಂಬಿರುವ ದೈವಗಳ ಮೇಲೆ ಅಪಾರ ಭಯ ಭಕ್ತಿಗಳಿಂದ ನಡೆದುಕೊಳ್ಳುವುದರೊಂದಿಗೆ ತಮ್ಮ ಮಾನಸಿಕ ಶಾಂತಿ ನೆಮ್ಮದಿಗಳ ತೃಪ್ತಿಯ ಜೀವನ ಅನುಭವಿಸುತ್ತಾರೆ.

ಇವರ ಕುಲ ಪಂಚಾಯ್ತಿಗಳು ಆಧುನಿಕ ಸರಕಾರದ ಕೋರ್ಟ್ ಕಛೇರಿಗಳಿಗಿಂತಲೂ ನಿಷ್ಪಕ್ಷಪಾತವಾದ ನ್ಯಾಯನಿರ್ಣಯಗಳು ಕೈಗೊಳ್ಳುತ್ತವೆ. ಏಕೆಂದರೆ, ಸಮುದಾಯದಲ್ಲಿ ನ್ಯಾಯ ಹೇಳುವ ಮುಖ್ಯಸ್ಥನೇ ತಪ್ಪು ಮಾಡಿದಾಗ ಆತನನ್ನು ಕುಲದಿಂದ ಬಹಿಷ್ಕರಿಸುವ ಶಕ್ತಿ ಆ ಸಮುದಾಯಕ್ಕೆ ಇರುತ್ತದೆ. ಹೀಗಾಗಿ ಸಾಮೂಹಿಕ ಚರ್ಚೆಗಳ ನಂತರ ಮುಖ್ಯಸ್ಥನು ನಿರ್ಧಾರ ಕೈಗೊಳ್ಳುವುದರಿಂದ ನಿಷ್ಪಕ್ಷಪಾತವಾದ ನಿರ್ಣಯಗಳು ಬರುತ್ತವೆ. ಒಂದೊಂದು ಸಲ ಇವರ ನ್ಯಾಯ ಪಂಚಾಯ್ತಿಗಳು ವಾರಗಟ್ಟಲೇ ನಡೆಯುತ್ತವೆ.

ಇವರ ಭಾಷೆ ಮತ್ತು ಜನಪದ ಸಾಹಿತ್ಯವು, ಮೂಲ ಮತ್ತು ವಿಶಿಷ್ಟ್ಯತೆಯನ್ನು ತೋರಿಸುವಲ್ಲಿ ಬಹಳ ಮಹತ್ವ ಪೂರ್ಣವಾಗಿವೆ. ಇವರ ಭಾಷೆಯು ವಿವಿಧ ಪ್ರಾದೇಶಿಕ ಭಾಷೆಗಳೊಂದಿಗೆ ಕಲಬೆರಿಕೆಯಾಗಿರುವುದು, ಭಾಷೆಯ ಅಧ್ಯಯನದ ಆಳಕ್ಕೆ ಇಳಿದಾಗ ತಿಳಿದು ಬರುತ್ತದೆ. ಇವರು ಹಾಡುವ ಹಾಡುಗಲ್ಲಿ ಸಮುದಾಯದ ಕಷ್ಟ ಸುಖ, ದೇವರ ಸ್ತುತಿಗೀತೆಗಳು, ಪ್ರಣಯ ಗೀತೆಗಳು, ಹಾಡುವಗೀತೆಗಳು ಇವರು ಜನಪದ ಸಾಹಿತ್ಯಕ್ಕೆ ನೀಡುವ ಕೊಡುಗೆಯಾಗಿದೆ. ಅಲ್ಲದೆ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಕೆಲವು ಹಾಡುಗಳನ್ನು ಬರೆದು ಅವುಗಳ ಭಾವಾರ್ಥವನ್ನು ವಿವರಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಇವರು ಎದುರಿಸುತ್ತಿರುವ ಆಧುನಿಕ ಸ್ಥಿತ್ಯಂತರಗಳ ಬದುಕಿನ ಜೀವನದಲ್ಲಿಯ ಸಮಸ್ಯೆಗಳು ಮತ್ತು ಅವುಗಳಿಗೆ ಪರಿಹಾರೋಪಾಯಗಳನ್ನು ಸೂಚಿಸಲಾಗಿದೆ. ದಿನದಿಂದ ದಿನಕ್ಕೆ ಕೈಗಾರೀಕರಣದಿಂದ ಇವರ ಮೂಲ ವೃತ್ತಿ ಮೂಲೆ ಗುಂಪಾಗುತ್ತಿರುವುದರಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವ ಈ ಸಂದರ್ಭದಲ್ಲಿ ಸಮುದಾಯದ ಅಭಿವೃದ್ಧಿಗಾಗಿ ವಿಶೇಷ ಮಿಸಲಾತಿಗಳು ಮತ್ತು ಯೋಜನೆಗಳು ರೂಪಿಸಿ ಅವಕಾಶಗಳನ್ನು ಕಲ್ಪಿಕೊಡುವುದು ಸರಕಾರದ ಮುಖ್ಯ ಗುರಿಯಾಗಬೇಕು.

ಮೂಲತಃ ಅಲೆಮಾರಿಗಳಾದ ಇವರು ಬಡತನದಲ್ಲಿ ನೊಂದು, ಶಿಕ್ಷಣದಿಂದ ವಂಚಿತವಾಗಿ, ರಾಜಕೀಯ ಅಧಿಕಾರದಿಂದ ಬಹುದೂರ ಉಳಿದು, ಗುಡಿಸಲು ಮತ್ತು ಗುಡಾರ ನಿವಾಸಿಗಳಾದ ಇವರಿಗೆ ಮತ್ತು ಇಂಥಹ ಸಮುದಾಯಗಳಿಗೆ ಸಾಮಾಜಿಕ ನ್ಯಾಯ ಒದಗಿಸಿ ಕೊಡಬೇಕಾದದ್ದು ತುಂಬಾ ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಇಂತಹ ಸಮುದಾಯಗಳ ಶೋಧನಾ ಕಾರ್ಯಗಳು ನಡೆಯಬೇಕಾಗಿದೆ.

ಪ್ರಸ್ತುತ ಬೈಲುಪತ್ತಾರರ ಅಧ್ಯಯನವು ಅಲೆಮಾರಿ ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನವಾಗುವುದು. ಇದರಿಂದ ಸಮಾಜಶಾಸ್ತ್ರ ಮತ್ತು ಅಲೆಮಾರಿ ಬುಡಕಟ್ಟುಗಳ ಅಧ್ಯಯನಕಾರರಿಗೆ ಹಾಗೂ ಇತರ ಸಮಾಜ ಮತ್ತು ಸರಕಾರದ ಯೋಜಕರಿಗೆ ಸಹಾಯವಾಗುವುದು. ಇದು ಕಾಲಮಿತಿಯ

ಅಧ್ಯಯನವಾಗಿರುವುದರಿಂದ ಹಲವಾರು ಸೂಕ್ಷ್ಮವಾದ ಅಂಶಗಳನ್ನು ಇಲ್ಲಿ ಕಲೆಹಾಕಲಾಗಲಿಲ್ಲ. ಇವರ ಹಲವಾರು ಘಟನೆಗಳ ಆಧಾರಿತ ಚರಿತ್ರೆಯನ್ನು ಶೋಧಿಸಲು ಇನ್ನೂ ಅವಕಾಶಗಳಿವೆ. ನನ್ನ ಗಮನಕ್ಕೆ ಬಂದ ಅಂಶಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ. ನನ್ನ ಗಮನಕ್ಕೆ ಬಾರದ ಅಂಶಗಳನ್ನು ಮುಂದಿನ ಅಧ್ಯಯನಕಾರರ ಅಧ್ಯಯನಕ್ಕೆ ಬಿಡಲಾಗಿದೆ.

## ಬೈಲುಪತ್ತಾರರ ವೃತ್ತಿ ಸಂಬಂಧಿ ಸಲಕರಣೆಗಳ ಮಾಹಿತಿ

೧. ಹಡಗಲ್ಲು (ಹದಗಣಿ) : ತಾಮ್ರ, ಹಿತ್ತಾಳೆ, ಗಿಲಾಟಿ, ಕಲ್ಲುಬೆಳ್ಳಿ, ಬೆಳ್ಳಿ, ಬಂಗಾರಗಳನ್ನು ಈ ಹದಗಣಿಯ ಮೇಲೆ ಇಟ್ಟು ತಮ್ಮಗೆ ಬೇಕಾದ ರೀತಿಯಲ್ಲಿ ಬಡಿದಾಗ ಆ ವಸ್ತುವಿನಲ್ಲಿ ಬದಲಾವಣೆಯ ರೂಪಾಂತರಗಳಾಗುವುದರಿಂದ ಈ ಹದ ಗಣಿಯನ್ನು ಬಳಸುತ್ತಾರೆ.

೨. ಸುತ್ತಿಗೆ : ಸುತ್ತಿಗೆಯಿಂದ ಹಡಗಲ್ಲನು ಬಳಸಿಕೊಂಡು ಅದರ ಮೇಲೆ ಇಟ್ಟು, ಸುತ್ತಿಗೆಯಿಂದ ಬಡಿದಾಗ ಸಾಮಾನುಗಳ ರೂಪವನ್ನು ತಮಗೆ ಬೇಕಾದ ರೀತಿಯಲ್ಲಿ ಬದಲಾವಣೆ ಮಾಡಿಕೊಳ್ಳಲು ಉಪಯೋಗಿಸುತ್ತಾರೆ.

೩. ಇಕ್ಕಳಿಕೆ : ಸಾಮಾನುಗಳನ್ನು ತಯಾರಿಸುವಾಗ ಇಕ್ಕಳಿಕೆಯಿಂದ ಬೇಕಾಗುವ ರೀತಿಯಲ್ಲಿ ಮಾಣಿಸಲಾಗುತ್ತದೆ. ಮತ್ತು ಕೈ ಸುಡುವ ಭಯವಿರುವುದರಿಂದ ಇಕ್ಕಳಿಕೆ ಬಳಸಲಾಗುತ್ತದೆ.

೪. ಕತ್ತರಿ : ಕೆಲಸ ಮಾಡುವ ಸಂದರ್ಭದಲ್ಲಿ ವಸ್ತುಗಳನ್ನು ಕತ್ತರಿಸಲು ಕತ್ತರಿ ಬಳಸಲಾಗುತ್ತದೆ.

೫. ಅರಾ : ಸಾಮಾನುಗಳನ್ನು ತಿಕ್ಕಿ ಅಳತೆಗೆ ಬದಲಾಯಿಸುವ ಸಂದರ್ಭದಲ್ಲಿ ಅರಾ ಬಳಸಲಾಗುತ್ತದೆ.

೬. ಕಂಮೇಚು : ತಾಮ್ರ, ಹಿತ್ತಾಳೆ, ಇತರ ತಂತಿಗಳ ಗಾತ್ರ ಕಡಿಮೆ ಮಾಡಲು ಇದನ್ನು ಬಳಸಲಾಗುತ್ತದೆ.

೭. ಚಿಮಣಿ : ಸಾಮಾನುಗಳನ್ನು ಬೆಸಿಗೆ ಮಾಡುವಾಗ ಮತ್ತು ಕಾಸುವುದಕ್ಕೆ, ಕರಗಿಸುವುದಕ್ಕೆ ಚಿಮಣಿ ಬಳಸಲಾಗುತ್ತದೆ.

೮. ಬಂಕನಳಿ : ಬಂಕನಳಿಯನ್ನು ಬಾಯಿಯಲ್ಲಿ ಹಿಡಿದು ಊದುವಾಗ, ತಮ್ಮಗೆ ಬೇಕಾಗುವ ಭಾಗಗಳಲ್ಲಿ ಬೆಂಕಿಯನ್ನು ತಿರುಗಿಸಿ ಊದುವ ಮೂಲಕ ಸಮಾನುಗಳನ್ನು ತಯಾರಿಸಲಾಗುತ್ತದೆ.

೯. ಚರಕ : ಚರಕ(ತಿತಿ)ದಿಂದ ಕುಲುಮೆಯಲ್ಲಿ ಇದ್ದಿಲುಗಳನ್ನು ಹಾಕಿ ಚರಕ ತಿರುಗಿಸುವದರ ಮೂಲಕ ಬೆಂಕಿಯ ಪ್ರಮಾಣವನ್ನು ತಮಗೆ ಬೇಕಾದ ಪ್ರಮಾಣದಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳಲು ಬಳಸಲಾಗುತ್ತದೆ.

೧೦. ಮೂಸೆ : ಬಂಗಾರ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಲ್ಲುಬೆಳ್ಳಿಗಳನ್ನು ಕರಗಿಸಲು ಮೂಸೆ ಬಳಸಲಾಗುತ್ತದೆ.

೧೧. ತಂಡಾಸ್ : ಕಬ್ಬಿಣದ ಚಡಿಯಿಂದ ಮಾಡಲ್ಪಟ್ಟ ಇದನ್ನು ಬೆಂಕಿಯಲ್ಲಿನ ಸಾಮಾನುಗಳನ್ನು ಹಿಡಿಯಲು ಬಳಸಲಾಗುತ್ತದೆ.

೧೨. ಚಾನಾ : ಚಾನಾದಿಂದ ವಸ್ತುಗಳನ್ನು ತಯಾರಿಸುವಾಗ ಕತ್ತರಿಸಲು ಇದನ್ನು ಉಪಯೋಗಿಸಲಾಗುತ್ತದೆ.

೧೩. ಅಗ್ಗಿಷ್ಟಿಕೆ : ಗಡಿಗೆಯನ್ನು ತಮ್ಮಗೆ ಬೇಕಾಗುವ ರೀತಿಯಲ್ಲಿ ಕತ್ತರಿಸಿ ಅದರಲ್ಲಿ ಬೆಂಕಿಯ ಕಣಗಳು ನಿಲ್ಲುವ ಹಾಗೇ ಗೋಲಾಕಾರದಲ್ಲಿ ವೃತ್ತ ಮಾಡಿರುತ್ತಾರೆ. ಸಾಮಾನುಗಳನ್ನು ಅಗ್ಗಿಯ ಮೇಲೆ ಹಾಕಿ ರೂಪ ಬದಲಾವಣೆ ಮಾಡಲು ಬಳಸಲಾಗುತ್ತದೆ.

೧೪. ಶ್ರವಣಾ : ಅತೀ ಸೂಕ್ಷ್ಮವಾದ ವಸ್ತುಗಳನ್ನು ಹಿಡಿಯಲು ಈ ಶ್ರವಣಾ ಸಾಧನವನ್ನು ಉಪಯೋಗಿಸಲಾಗುತ್ತದೆ.

೧೫. ವರಗಲ್ಲು : ಬಂಗಾರ ಬೆಳ್ಳಿಯ ನೈಜ ಮೌಲ್ಯವನ್ನು ಅಳೆಯಲು ಉಪಯೋಗಿಸ ಲಾಗುತ್ತದೆ.

೧೬. ಚಿಮಣಿ : ಕಂಬ ಸಣ್ಣ ಚಿಮಣಿಯನ್ನು ಇದರ ಮೇಲೆ ಇಟ್ಟು ಸಾಮಾನುಗಳನ್ನು ಕಾಸುವ ಸಂದರ್ಭದಲ್ಲಿ ಇದನ್ನು ಬಳಸಲಾಗುತ್ತದೆ.

೧೭. ಬ್ರಸ್ : ಸಾಮಾನುಗಳನ್ನು ತೊಳೆಯುವ ಸಂದರ್ಭದಲ್ಲಿ ಈ ಬ್ರಸ್ ಬಳಸಲಾಗುತ್ತದೆ.

೧೮. ಚೌಕಟ್ಟು : ಈ ಚೌಕಟ್ಟಿನಲ್ಲಿ ಹಲವಾರು ಸೈಜಿನ ಪ್ರಮಾಣದ ತಗ್ಗುಗಳಿರುತ್ತವೆ. ಇದನ್ನು ತಾಳಿ ಮಾಡುವ ಸಂದರ್ಭದಲ್ಲಿ ಮತ್ತು ಇತರ ಸಾಮಾನುಗಳನ್ನು ಮಾಡುವ ಸಂದರ್ಭದಲ್ಲಿ ಉಪಯೋಗಸಲಾಗುತ್ತದೆ.

೧೯. ಬಣ್ಣ : ಅರೆಯುವ ಕಲ್ಲು ಚಿಕ್ಕ ಸಾಮಾನುಗಳನ್ನು ತೊಳೆಯುವುದಕ್ಕೆ ಮತ್ತು ಸಾಮಾನುಗಳ ಹೊಳಪು ಬರುವ ಬಣ್ಣ ಹಾಕಿ ಸಾಮಾನುಗಳನ್ನು ತಯಾರಿಸಲು ಇದನ್ನು ಬಳಸಲಾಗುತ್ತದೆ.

೨೦. ನೀರಿನ ಟಬ್ಬು : ನೀರಿನ ಟಬ್ಬಿನಲ್ಲಿ ಸಾಬುನ್ ಮತ್ತು ಕೆಮಿಕಲ್ ಹಾಕಿ ಬರುಗಳನ್ನು ತಯಾರಿಸಿ ಸಾಮಾನುಗಳನ್ನು ತೊಳೆಯುವ ಸಂದರ್ಭದಲ್ಲಿ ಬಳಸಲಾಗುತ್ತದೆ.

೨೧. ತೇಜಾಬ್ ಬಾಟಲಿ : ತೇಜಾಬ್ ಎಣ್ಣೆಯಿಂದ ಸಾಮಾನುಗಳನ್ನು ತೊಳೆಯಲು ಬಳಸಲಾಗುತ್ತದೆ. ಹೀಗಾಗಿ ಬಾಟಲಿಯಲ್ಲಿ ತೇಜಬ್ ಸಂಗ್ರಹಿಸಿ ಇಡಲಾಗುತ್ತದೆ.

೨೨. ಪಡಚ್ಚು : ಸಾಮಾನುಗಳನ್ನು ಹಗುರವಾಗಿ ತಿಕ್ಕುವ ಸಂದರ್ಭದಲ್ಲಿ ಇದನ್ನು ಬಳಸಲಾಗುತ್ತದೆ.

ಅಂಕಿಅಂಶಗಳು ೧. ಗುಲ್ಬರ್ಗಾ ಜಿಲ್ಲೆಯ ಚೈಲುಪತ್ತಾರರ ತಾಲೂಕುವಾರು ಲಿಂಗವಾರು ಜನಸಂಖ್ಯೆ ಮತ್ತು ವಯೋಗುಂಪು

| | | ಜನಸಂಖ್ಯೆ | | | ವಯೋಗುಂಪು ೦ - ೪ ವರ್ಷ | | | ೫ - ೧೭ ವರ್ಷ | | | ೧೮ - ೪೦ ವರ್ಷ | | | ೪೧ - ೬೦ ವರ್ಷ | | | ೬೧ರ ಮೇಲ್ಪಟ್ಟು | | |
|---|---|---|---|---|---|---|---|---|---|---|---|---|---|---|---|---|---|---|---|
| ತಾಲ್ಲೂಕು | ಕುಟುಂಬ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆಳಂದ | ೧ | ೭ | ೩ | ೧೦ | ೧ | | ೧ | ೩ | | ೩ | ೨ | ೨ | ೪ | ೧ | ೧ | ೨ | | | |
| ಚಿತ್ತಾಪುರ | ೪ | ೧೦ | ೧೦ | ೨೦ | ೧ | ೨ | ೩ | ೨ | ೧ | ೩ | ೪ | ೫ | ೯ | ೩ | ೨ | ೫ | | | |
| ಗುಲ್ಬರ್ಗಾ ನಗರ | ೧೩ | ೫೬ | ೪೪ | ೧೦೦ | ೭ | ೫ | ೧೨ | ೨೨ | ೧೨ | ೩೪ | ೧೪ | ೧೭ | ೩೧ | ೭ | ೭ | ೧೪ | ೪ | ೫ | ೯ |
| ಜೇವರ್ಗಿ | ೯ | ೩೪ | ೩೨ | ೬೬ | ೨ | ೨ | ೪ | ೧೨ | ೧೦ | ೨೨ | ೧೬ | ೧೪ | ೩೦ | ೪ | ೭ | ೭ | | ೧ | ೧ |
| ಸೇಡಂ | ೪ | ೧೦ | ೧೧ | ೨೧ | | | | ೫ | ೪ | ೯ | ೨ | ೫ | ೭ | ೩ | ೨ | ೪ | ೨ | | |
| ಸೋರಾಪುರ | ೧೨ | ೫೬ | ೪೯ | ೧೦೫ | ೮ | ೮ | ೧೬ | ೧೭ | ೧೧ | ೨೮ | ೨೪ | ೨೧ | ೪೫ | ೫ | ೭ | ೧೨ | ೨ | ೨ | ೪ |
| ಶಾಹಾಪುರ | ೬೮ | ೨೦೩ | ೧೮೫ | ೩೮೯ | ೨೦ | ೧೮ | ೩೮ | ೬೯ | ೬೦ | ೧೨೯ | ೭೮ | ೭೯ | ೧೫೭ | ೨೭ | ೨೩ | ೫೦ | ೭ | ೬ | ೧೩ |
| ಯಾದಗಿರ | ೭೬ | ೨೮೪ | ೨೫೩ | ೫೩೭ | ೩೩ | ೩೬ | ೬೯ | ೮೬ | ೮೦ | ೧೬೬ | ೧೧೦ | ೧೦೨ | ೨೧೨ | ೩೬ | ೨೮ | ೬೪ | ೧೬ | ೮ | ೨೪ |
| ಒಟ್ಟು | ೧೮೭ | ೬೬೦ | ೫೮೭ | ೧೨೪೮ | ೭೨ | ೭೧ | ೧೪೩ | ೨೧೬ | ೧೭೮ | ೩೯೪ | ೨೫೦ | ೨೪೫ | ೪೯೫ | ೮೬ | ೭೭ | ೧೫೮ | ೩೧ | ೨೨ | ೫೧ |

ಅಂಕಿಅಂಶಗಳು ೨. ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ತಾಲೂಕುವಾರು ಲಿಂಗವಾರು ವೈವಾಹಿಕ ಸ್ಥಾನಮಾನಗಳು ಮತ್ತು ಶೈಕ್ಷಣಿಕ ಮಟ್ಟ

| | | ವೈವಾಹಿಕ ಸ್ಥಾನಮಾನಗಳು | | | | | | | | | ಶೈಕ್ಷಣಿಕ ಸ್ಥಾನಮಾನಗಳು | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಅವಿವಾಹಿತ | | | ವಿವಾಹಿತ | | | ವಿಧುರು, ವಿಧವೆ | | | ಪ್ರಾಥಮಿಕ ಶಿಕ್ಷಣ | | | ಮಾಧ್ಯಮಿಕ ಶಿಕ್ಷಣ | | | ಪ್ರೌಢಶಿಕ್ಷಣ | | | ಪದವಿ ಪೂರ್ವ ಶಿಕ್ಷಣ | | | ಪದವಿ ಶಿಕ್ಷಣ | | | ಇನ್ನಿತರೆ ಶಿಕ್ಷಣ | | |
| ತಾಲ್ಲೂಕು | ಕುಟುಂಬ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆಳಂದ | ೧ | ೪ | | ೪ | ೩ | ೩ | ೬ | | | | ೧ | | ೧ | | | | | | | ೧ | | ೧ | | | | | | |
| ಚಿತ್ತಾಪುರ | ೪ | ೪ | ೫ | ೯ | ೫ | ೫ | ೧೦ | ೧ | | ೧ | | | | | | | ೧ | | ೧ | ೧ | | ೧ | | | | | | |
| ಗುಲ್ಬರ್ಗಾ ನಗರ | ೧೩ | ೩೫ | ೨೦ | ೫೫ | ೨೦ | ೨೦ | ೪೦ | ೧ | ೪ | ೫ | ೨ | ೫ | ೭ | ೧ | | ೧ | ೨ | ೧ | ೩ | ೨ | | ೨ | ೧ | | ೧ | | ೧ | ೧ |
| ಜೇವರ್ಗಿ | ೯ | ೧೯ | ೧೨ | ೩೧ | ೧೪ | ೧೪ | ೨೮ | ೧ | ೬ | ೭ | ೪ | | ೪ | ೧ | | ೧ | ೬ | ೧ | ೭ | ೧ | | ೧ | | | | | | |
| ಸೇಡಂ | ೪ | ೫ | ೬ | ೧೧ | ೫ | ೫ | ೧೦ | | | | ೧ | | ೧ | | | | ೧ | ೧ | ೨ | ೧ | | ೧ | | | | | | |
| ಸೋರಾಪುರ | ೧೨ | ೩೨ | ೧೯ | ೫೧ | ೨೩ | ೨೫ | ೪೮ | ೧ | ೫ | ೬ | ೩ | ೭ | ೧೦ | ೮ | ೧ | ೯ | ೪ | ೧ | ೫ | ೩ | | ೩ | | | | | | |
| ಶಾಹಾಪುರ | ೬೮ | ೧೦೮ | ೭೬ | ೧೮೪ | ೮೮ | ೯೩ | ೧೮೧ | ೬ | ೧೫ | ೨೧ | ೧೯ | ೧೬ | ೩೪ | ೧೮ | ೭ | ೨೩ | ೨೩ | ೨ | ೨೩ | ೩ | | ೨ | ೨ | | ೨ | | | |
| ಯಾದಗಿರ | ೭೬ | ೧೬೨ | ೧೨೧ | ೨೮೩ | ೧೧೩ | ೧೧೮ | ೨೩೧ | ೮ | ೧೫ | ೨೩ | ೨೭ | ೧೪ | ೪೧ | ೨೬ | ೩ | ೨೯ | ೨೫ | ೧ | ೨೬ | ೪ | | ೪ | ೧ | | ೧ | ೧ | | ೧ |
| ಒಟ್ಟು | ೧೮೭ | ೩೬೯ | ೨೫೯ | ೬೨೮ | ೨೭೧ | ೨೮೩ | ೫೫೪ | ೧೮ | ೪೫ | ೬೩ | ೫೭ | ೪೨ | ೯೮ | ೫೪ | ೧೧ | ೬೩ | ೬೨ | ೭ | ೬೭ | ೧೬ | | ೧೫ | ೪ | | ೪ | ೧ | ೧ | ೨ |

ಅಂಕಿಅಂಶಗಳು ೩. ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ತಾಲೂಕುವಾರು ಲಿಂಗವಾರು ಕಸಬುಗಳು ಹಾಗೂ ಸರಕಾರಿ ಸೌಲಭ್ಯಗಳು

| | | ಕಸಬುಗಳು ಕೃಷಿಕರು | | | ಕೃಷಿಕೂಲಿಗಳು | | | ಸರಕಾರಿ ನೌಕರಸ್ಥರು | | | ಸಣ್ಣ ವ್ಯಾಪಾರಸ್ಥರು | | | | ಇತರ ಕಸಬುಗಳು | | | ಕುಟುಂಬಯೋಜನೆ | | | ವಿಧವಾ | ಅಂಗವಿಕಲ | | | ವೃದ್ಧಪಾನ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ತಾಲ್ಲೂಕು | ಕುಟುಂಬ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಖಾಸಗಿ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಹೆಣ್ಣು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಆಳಂದ | ೧ | | | | | | | | | | ೩ | ೨ | ೫ | | | | | | ೧ | ೧ | | | | | | | |
| ಚಿತ್ತಾಪುರ | ೪ | ೧ | ೨ | ೩ | ೧ | ೪ | ೫ | | | | ೫ | ೧ | ೬ | | | | | | | | | | | | | | |
| ಗುಲ್ಬರ್ಗಾ ನಗರ | ೧೩ | | | | ೧ | ೬ | ೭ | ೧ | ೧ | ೨ | ೨೫ | ೧೧ | ೩೬ | | ೧ | ೧ | ೨ | | ೪ | ೪ | ೨ | ೨ | ೧ | ೩ | ೧ | ೧ | ೨ |
| ಜೇವರ್ಗಿ | ೯ | | | | | ೭ | ೭ | ೧ | | ೧ | ೧೫ | ೭ | ೨೨ | | | | | | ೪ | ೪ | ೧ | ೨ | | ೨ | | | |
| ಸೇಡಂ | ೪ | | | | | ೩ | ೩ | | | | ೫ | ೨ | ೭ | | | | | | | | | | | | | | |
| ಸೋರಾಪುರ | ೧೨ | | | | | ೪ | ೪ | ೧ | | ೧ | ೨೯ | ೨ | ೩೧ | | | | | | ೩ | ೩ | | | | | | | |
| ಶಾಹಾಪುರ | ೬೮ | | ೩ | ೩ | ೧೬ | ೬೬ | ೮೨ | ೩ | | ೩ | ೯೩ | ೧೩ | ೧೦೬ | | | | | | ೭ | ೭ | ೫ | ೨ | ೧ | ೩ | | | |
| ಯಾದಗಿರ | ೭೬ | | | | ೧೬ | ೮೪ | ೧೦೦ | | | | ೧೨೭ | ೩೨ | ೧೫೯ | ೨ | ೩ | | ೩ | | ೧೩ | ೧೩ | ೨ | ೪ | ೨ | ೬ | ೧ | ೨ | ೩ |
| ಒಟ್ಟು | ೧೮೭ | ೧ | ೫ | ೬ | ೩೪ | ೧೭೩ | ೨೦೮ | ೬ | ೧ | ೭ | ೩೦೨ | ೭೦ | ೩೭೨ | ೨ | ೪ | ೧ | ೫ | | ೩೨ | ೩೨ | ೧೦ | ೧೦ | ೪ | ೧೪ | ೨ | ೩ | ೫ |

ಅಂಕಿಅಂಶಗಳು ೪. ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ತಾಲೂಕುವಾರು ಕುಟುಂಬಗಳು, ಭೂ ಹಿಡುವಳಿ ಶ್ರೇಣಿಗಳಲ್ಲಿ, ಪಶುಸಂಪತ್ತು ಹಾಗೂ ಮನೆಗಳ ಮಾದರಿ

| | | ಭೂಮಿಗಳು | | | | ಪಶುಸಂಪತ್ತು | | | | ಮನೆಗಳು | | | | | | | |
|---|---|---|---|---|---|---|---|---|---|---|---|---|---|---|---|---|---|
| ತಾಲ್ಲೂಕು | ಕುಟುಂಬ | ಒಣಭೂಮಿ | ನೀರಾವರಿ | ಒಟ್ಟು | ಭೂ ಶ್ರೇಣಿಗಳು | ಎತ್ತು | ಆಕಳು | ಕುರಿ ಮೇಕೆ | ಕೋಳಿ | ಗುಡಾರ | ಗುಡಿಸಲು | ಟಿನ್‌ಮನೆ | ಮಾಳಿಗೆ | ಆರ್.ಸಿ.ಸಿ. | ಹೆಂಚಿನ | ಜ.ಆಶ್ರಯ | ಬಾಡಿಗೆ |
| ಆಳಂದ | ೧ | ೩ | | ೩ | D/1 | | | | ೪ | | | | | | | | ೧ |
| ಚಿತ್ತಾಪುರ | ೪ | ೨೫ | | ೨೫ | B/1,O/3 | ೪ | ೧ | ೪ | ೧೮ | | | | ೨ | | ೧ | | ೧ |
| ಗುಲ್ಬರ್ಗಾ ನಗರ | ೧೩ | | | | O/13 | | | ೧ | ೬ | ೭ | | | | ೧ | | ೪ | ೧ |
| ಜೇವರ್ಗಿ | ೯ | ೪ | | ೪ | D/1,O/8 | | | ೨ | ೮ | ೧ | ೧ | | ೨ | ೧ | | | ೪ |
| ಸೇಡಂ | ೪ | | | | O/4 | | | ೧೦ | ೪ | ೧ | | | | | | ೩ | |
| ಸೋರಾಪುರ | ೧೨ | | | | O/12 | | | ೪ | ೧೩ | ೫ | | ೩ | ೧ | ೨ | | | ೧ |
| ಶಾಹಾಪುರ | ೬೮ | ೪೬ | ೭ | ೫೩ | C/3,D/4,E/6,O/55 | ೨ | | ೨೦ | ೪೪ | ೧೦ | ೮ | ೬ | ೧೩ | ೨ | ೧ | ೨೩ | ೫ |
| ಯಾದಗಿರ | ೭೬ | ೫೬ | | ೫೬ | E/7,O/69 | | | ೨ | ೮೨ | ೨೫ | ೧೧ | ೧೨ | ೧೬ | | ೧ | ೮ | ೩ |
| ಒಟ್ಟು | ೧೮೭ | ೧೩೪ | ೭ | ೧೪೧ | B/1,C/3,D/6,E/13,O/174 | ೬ | ೧ | ೪೩ | ೧೭೯ | ೪೯ | ೨೦ | ೨೧ | ೩೪ | ೬ | ೩ | ೩೮ | ೧೬ |

# ಗ್ರಂಥಋಣ


೧ ಕಪಾಡಿಯಾ, ಕೆ.ಎಂ., (ಮೂಲ) *ಭಾರತದಲ್ಲಿ ವಿವಾಹ ಮತ್ತು ಕುಟುಂಬ* ಮಹೇಶ್ವರಪ್ಪ (ಅನು) (ಮೈಸೂರು : ಕನ್ನಡ ಅಧ್ಯಾಯನ ಕೇಂದ್ರ ಮೈಸೂರು ವಿಶ್ವವಿದ್ಯಾಲಯ)

೨ ಜೋಗನ್ ಶಂಕರ್., *ಗ್ರಾಮ ಸಮಾಜ* (ಮೈಸೂರು : ಜೀವಾ ಪ್ರಕಾಶನ, ೧೯೯೧)

೩ ಬೈರಪ್ಪ, ಕೆ., *ಭಾರತೀಯ ಸಮಾಜಿಕ ಸಮಸ್ಯೆಗಳು* (ಗದಗ : ಸುರೇಶ ಪಬ್ಲಿಕೇಷನ್ಸ್, ೧೯೯೧)

೪ ಸಂಗಣಾಚಾರಿ,ಎಸ್.ಎಸ್., *ಭಾರತೀಯ ಸಮಾಜದ ಅಧ್ಯಯನ* (ಬಾಗಲಕೊಟ: ಜಯಶ್ರೀ ಪ್ರಕಾಶನ, ೧೯೯೯)

೫ ಕೃಷ್ಣ, ಬಿ.ಆರ್., *ಕೈಗಾರಿಕ ಸಮಾಜಶಾಸ್ತ್ರ* (ಮೈಸೂರು : ಚೇತನಾ ಪಬ್ಲಿಕೇಷನ್ಸ್ ಮೈಸೂರು, ೧೯೯೨)

೬ ಬೈರಪ್ಪ, ಕೆ., *ಸಮಾಜಶಾಸ್ತ್ರದ ಮೂಲ ತತ್ವಗಳು* (ಗದಗ : ಸುರೇಶ ಪಬ್ಲಿಕೇಶನ, ೧೯೯೫)

೭ ಕಾಳೇಗೌಡ ನಾಗವಾರ, ಪ್ರೊ. ಮತ್ತು ಹುಚ್ಚಪ್ಪ ಮಾಸ್ತರ್, ಎನ್. (ಸಂ) *ಗಿರಿಜನ ಸಂಸ್ಕೃತಿ* (ಕನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ ಪ್ರಕಾಶಕರು)

೮ ಮೈತ್ರಿ, ಕೆ.ಎಂ., *ಬುಡಕಟ್ಟು ಕುಲಕಸಬುಗಳು* (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨)

೯ ಕರೀಗೌಡ ಬೀಚನಹಳ್ಳಿ., (ಸಂ) *ಕರಕುಶಲ ಕಲೆಗಳು* (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ)

೧೦ ಬೋರಲಿಂಗಯ್ಯ, ಹಿ.ಚಿ., *ಬುಡಕಟ್ಟು ದೈವಾರಾಧನೆ* (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ,೨೦೦೦)

೧೧ ಪ್ರಭಾಕರ್, ಎ.ಎಸ್., *ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು* (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦)

೧೨ ಬಿ.ನಾಯಕ್, ಡಿ., *ಲಂಬಾಣಿ ಜನಪದ ಸಾಹಿತ್ಯ* (ಬಂಜಾರ್ ಪ್ರಕಾಶನ್ ಗುಲ್ಬರ್ಗಾ, ೨೦೦೧)

೧೩ ಖಿಂಡೋಬಾ, ಪಿ.ಕೆ., *ಕರ್ನಾಟಕದ ಲಂಬಾಣಿಗಳು* (ಗುಲ್ಬರ್ಗಾ: ಪ್ರಕಾಶಕರು: ದಿ.ತೇಜಸಿಂಗ್ ರಾಠೋಡ್ ಮೆಮೊರಿಯಲ್ ಟ್ರಸ್ಟ್, ೧೯೯೧)

೧೪ ಗಂಗಾಧರ ದೈವಜ್ಞ, *ಶಿರಸಂಗಿ ಕಾಳಮ್ಮಾ* (ಶ್ವೇತಾ ಭಾಗೀರಥಿ ಪ್ರಕಾಶನ ಹಂಪಿ ಪವರ ಕ್ಯಾಂಪ,೨೦೦೨)

೧೫ ಅರ್ಜುನ ಗೊಳಸಂಗಿ., *ದಲಿತರ ಬದುಕು ಮತ್ತು ಸಂಸ್ಕೃತಿ* (ಅಥಣಿ : ವಿಮೋಚನಾ ಪ್ರಕಾಶನ, ೨೦೦೦)

೧೬ "ಭಾಷೆ" ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ-೧, (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦)

೧೭ ಹಿರೇಮಠ, ಎಸ್.ಎಸ್., *ಜಾತ್ರೆಗಳು* ಸಮತಾ ಪ್ರಕಾಶನ ಹೊಸಪೇಟೆ, ೧೯೯೩

೧೮ ಗಂಗಾಧರ ದೈವಜ್ಞ., *ಬುಡಕಟ್ಟು ಸಮಾಜ* (ಹುಟ್ಟು-ಸಾವಿನ ನಡುವೆ) (ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೦)

೧೯ ಲೀಬಾನ್, ಎಚ್.ಜಿ., (ಮೂಲ) **ಡಿ.ಎಸ್.ಜಯಪ್ಪಗೌಡ.,** (ಅನು) ಮಾನವ *ಭೂಗೋಳಶಾಸ್ತ್ರ* (ಮೈಸೂರು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ೧೯೭೭)

೨೦ ಬೋರಲಿಂಗಯ್ಯ, ಹಿ.ಚಿ., *ಕಾಡು ಕಾಂಕ್ರೀಟ್ ಮತ್ತು ಜಾನಪದ* (ಬೆಂಗಳೂರು: ಅಕ್ಷರ ಪ್ರಕಾಶನ, ೧೯೯೫)

೨೧ ಕರಿಶೆಟ್ಟಿ ರುದ್ರಪ್ಪ. (ಡಾ); ೧೯೯೫ : **ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ;** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೨ ಕರೋವ್ಕಿನ್. ಎಫ್; ೧೯೮೭ : **ಪುರಾತನ ಜಗತ್ತಿನ ಇತಿಹಾಸ ;** ನವಕರ್ನಾಟಕ ಪಬ್ಲಿಕೇಷನ್ ಪ್ರೈವೆಟ್ ಲಿಮಿಟಿಡ್, ಬೆಂಗಳೂರು.

೨೩ ಪಮ್ಮಾರ. ಬಿ.ಎನ್. (ಡಾ); ೧೯೯೪: ಬುಡುಬುಡುಕೆಯವರು: ಒಂದು ಅಧ್ಯಯನ; ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ಮಹಾಪ್ರಬಂಧ.

೨೪ ಪ್ರಹ್ಲಾದ ಬೆಟಗೇರಿ; ೧೯೯೩: **ಅಡವಿಚೆಂಚರ ಸಂಸ್ಕೃತಿ;** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೫ ಭಾಸ್ಕರ್. ಟಿ.ಎಂ. (ಡಾ); ೨೦೦೦: **ಸುಡುಗಾಡು ಸಿದ್ಧರು: ಒಂದು ಸಾಂಸ್ಕೃತಿಕ ಅಧ್ಯಯನ;** ಮರುಗ ಪ್ರಕಾಶನ, ಗುಲಬರ್ಗಾ.

೨೬ ಬೋರಲಿಂಗಯ್ಯ. ಹಿ.ಚಿ. (ಸಂ); ೧೯೯೬: **ಕರ್ನಾಟಕ ಜನಪದ ಕಲೆಗಳ ಕೋಶ;** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭ ಮಲ್ಲಿನಾಥಯ್ಯ ಡಿ.ಎಚ್., ೧೯೭೪: **ಸಾಂಸ್ಕೃತಿಕ ಮಾನವಶಾಸ್ತ್ರ;** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೮ ರಾಜಣ್ಣ. ಆರ್., ೧೯೮೨: ನಾಯಕ ಜನಾಂಗದ ಇತಿಹಾಸ; ಪ್ರಕಾಶನ, ಆರ್.ರಾಜಣ್ಣ, ಚಳ್ಳಕೆರೆ.

೨೯ ಶಂಕರನಾರಾಯಣ. ತೀ.ನಂ. (ಡಾ); ೧೯೮೨: ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೦ ಶಂಕರ್‌ರಾವ್. ಚ. ನ., ೧೯೯೧: **ಭಾರತೀಯ ಸಮಾಜ;** ಜೈ ಭಾರತ್ ಪ್ರಕಾಶನ, ಮಂಗಳೂರು.

೩೧ ......... ., ೧೯೯೨: ***ಸಮಾಜಶಾಸ್ತ್ರ;*** ಜೈ ಭಾರತ್ ಪ್ರಕಾಶನ, ಮಂಗಳೂರು.

೩೨ ಸೂರ್ಯನಾಥ ಯು ಕಾಮತ್. (ಮುಖ್ಯ ಸಂಪಾದಕ); ೧೯೮೪:ಕರ್ನಾಟಕ ರಾಜ್ಯ ಗ್ಯಾಸೆಟಿಯರ್;ಭಾಗ-೧, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ.

೩೩ ......... ., ೧೯೮೬: ಕರ್ನಾಟಕ ರಾಜ್ಯ ಗ್ಯಾಸೆಟಿಯರ್; ಭಾಗ-೩, ಕರ್ನಾಟಕ ರಾಜ್ಯ ಸರಕಾರದ ಪ್ರಕಟಣೆ.

೩೪ ನಿಘಂಟು : ೧೯೭೭: ಕನ್ನಡ ರತ್ನಕೋಶ; ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು.

೩೫ ಖಂಡೋಬ ಪಿ.ಕೆ., *ಸುಡುಗಾಡು ಸಿದ್ಧರ ಸಂಸ್ಕೃತಿ* ಕರ್ನಾಟಕ ಸಾಹಿತ್ಯ ಅಕಡೇಮಿ, ಬೆಂಗಳೂರು

೩೬ ನಂಜಮ್ಮಣಿ ಎಂ., *ಸಾಮಾಜಿಕ ಮಾನವಶಾಸ್ತ್ರ* ಮೈಸೂರು, ೧೯೬೬

೩೭ ನಾಗೇಗೌಡ ಎಚ್.ಎಲ್., **ವೆರಿಯರ್** ಎಲ್ವಿನ್ ಗಿರಿಜನ ಪ್ರಪಂಚ, ಸಾಹಿತ್ಯ ಸಾಧನ ಪ್ರಕಾಶನ ಬೆಂಗಳೂರು, ೧೯೭೯

೩೮ ನಂಜಮ್ಮಣಿ ಎಂ., *ಬಾರತೀಯ ಸಾಮಾಜಿಕ* ಸಂಸ್ಥೆಗಳು ಮೈಸೂರು ವಿಶ್ವವಿದ್ಯಾಲಯ, ಮೈಸೂರು

೩೯ ನಾರಾಯಣ ಎಂ., ಗ್ರಾಮಿಣ ಮತ್ತು ನಗರ ಸಮಾಜಶಾಸ್ತ್ರ ಚೇತನ್ ಬುಕ್‌ಹೌಸ್, ಮೈಸೂರು, ೧೯೯೩

೪೦ ನಾಯಕ್ ಎನ್.ಆರ್., ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೪೧ ಪುರುಷೋತ್ತಮ ಬಿಳಿಮಲೆ., ಕೊರಗರ ಸಂಸ್ಕೃತಿ ಕರ್ನಾಟಕ ಸಾಹಿತ್ಯ ಆಕಾಡೆಮಿ ಬೆಂಗಳೂರು, ೧೯೯೩

೪೨ ಪುರುಷೋತ್ತಮ ಬಿಳಿಮಲೆ., ಕುಡುಕಟ್ಟು, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೧೯೯೭

೪೩ ಬೋರಲಿಂಗಯ್ಯ ಹಿ.ಚಿ., *ಸಿದ್ದಿಯರ ಸಂಸ್ಕೃತಿ* ಕನಾಟಕ ಸಾಹಿತ್ಯ ಆಕಾಡೆಮಿ ಬೆಂಗಳೂರು, ೧೯೯೩

೪೪ ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಾಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧

೪೫ ಸಣ್ಣರಾಮ., ಲಂಬಾಣಿ ಸಂಸ್ಕೃತಿ, ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾಲಯ ಶಂಕರಘಟ್ಟ, ೧೯೯೯

## ಇಂಗ್ಲಿಷ್ ಗ್ರಂಥಋಣ

1. Jan Brouwer., *The Makers of the World* (Delhi : Oxford University Pres, 1995)
2. Singh, K.S., *Indios Communities* (A-G), (Delhi : Oxford University Pres, 1998)
3. Iyer, L.K.A., *The Mysore Tribes and Castes* (Delhi : Mithal Publication, 1988),Vol-IV,
4. Madan, G.R. *Indian Social problems* (Bangalore: Allied Publishars) Vol.I,
5. Dipankan Gupta., *Social Stratification* (Bombay: Oxford University Pres 1992)
6. Elwin Verrier., *The Religin of an India Tribe* (Bombay: Oxford University Pres, 1995)
7. G.S.Ghury., *Karnataka Backward Classess Commission Report* Bangalore: Govt Pres, 1976
8. Nirmal Kumar Bose., *Tribe Life in India* New Delhi: Nationas Book Trust, 1971
9. Thurston., *Caste and Tribes of Southern India* (New Delhi: Asian Educational Services, 1909)

## ವಕ್ತೃವಿವರ

| ಹೆಸರು | ಬೆಡಗು | ವಯಸ್ಸು | ಸ್ಥಳ | ದಿನಾಂಕ |
|---|---|---|---|---|
| ೧. ಲಕ್ಷ್ಮಣ್ಣಾ ತಂದೆ ಲೋಕಾಜಿ | ಕಬಸ್ತೋಡ್ | ೪೫ | ಗುಲ್ಬರ್ಗಾ | ೧೭.೧೨.೦೨ |
| ೨. ರಾಮಭಾಯಿ ಗಂಡ ಅರ್ಜುನ್ | ಗೌಡ್ಕ | ೭೦ | ಗುಲ್ಬರ್ಗಾ | ೧೭.೧೨.೦೨ |
| ೩. ಅಮ್ಮಣೀ ತಂದೆ ವೆಂಕಪ್ಪ | ಗೌಡ್ಕ | ೩೪ | ಗುಲ್ಬರ್ಗಾ | ೧೭.೧೨.೦೨ |
| ೪. ಅನೂಸೂಯಮ್ಮ ಗಂಡ ವಿಶ್ವನಾಥ | ಸಪೋಡ್ | ೩೮ | ಗುಲ್ಬರ್ಗಾ | ೧೮.೧೨.೦೨ |
| ೫. ಅರ್ಜುನಪ್ಪ ತಂದೆ ಮಾನಪ್ಪ | ಬಂಜೋಡ್ | ೫೦ | ಭೀಮನಹಳ್ಳಿ | ೧೨.೧೨.೦೨ |
| ೬. ಶಿವಶಂಕರ ತಂದೆ ಭೀಮರಾಯ | ಗೌಡ್ಕ | ೩೪ | ಜೇವರ್ಗಿ | ೦೫.೧೨.೦೨ |
| ೭. ಗಂಗಾಭಾಯಿ ಗಂಡ ಕೃಷ್ಣಪ್ಪ | ಗೌಡ್ಕ | ೬೦ | ಇಜೇರ | ೦೫.೧೨.೦೨ |
| ೮. ಅರ್ಜುನಪ್ಪ ತಂದೆ ಮೋಕಾರ್ಜಿ | ಕಬಸ್ತೋಡ್ | ೬೫ | ಸೇಡಂ | ೧೦.೧೨.೦೨ |
| ೯. ಲಕ್ಷ್ಮಬಾಯಿ ಗಂಡ ಅರ್ಜುನಪ್ಪ | ಕಬಸ್ತೋಡ್ | ೫೨ | ಸುರುಪುರ | ೦೭.೧೨.೦೨ |
| ೧೦. ಕಮಲಾಕ್ಷಿ ತಂದೆ ಅರ್ಜುನಪ್ಪ | ಕಬಸ್ತೋಡ್ | ೧೨ | ಸುರುಪುರ | ೦೭.೧೨.೦೨ |
| ೧೧. ಹುಸೇನಪ್ಪ ತಂದೆ ನರಸಪ್ಪ | ಕಬಸ್ತೋಡ್ | ೭೦ | ಕಕ್ಕೆರಾ | ೦೮.೧೨.೦೨ |
| ೧೨. ಜೀವಣ್ಣಾ ತಂದೆ ಮೊನಪ್ಪಾ | ಕಬಸ್ತೋಡ್ | ೨೮ | ಭಟ್ನಳ್ಳಿ | ೦೪.೧೨.೦೨ |
| ೧೩. ಗೋಪಾಲ ತಂದೆ ಹಣಮಂತ | ಪರದನವಾಡ್ | ೩೫ | ಗುರುಸಣಗಿ | ೦೫.೧೨.೦೨ |
| ೧೪. ರಾಜಮ್ಮಾ ಗಂಡ ಮಲ್ಲಿಕಾರ್ಜುನ್ | ಬಂಜೋಡ್ | ೩೨ | ಹತ್ತಿಗೂಡುರು | ೦೬.೧೨.೦೨ |
| ೧೫. ವಿಶ್ವನಾಥ ತಂದೆ ಚಂದ್ರಶೇಖರ | ಬಂಜೋಡ್ | ೧೬ | ಇಂಗಳಗಿ | ೦೫.೧೨.೦೨ |
| ೧೬. ಮುತ್ತೇಲಮ್ಮಾ ಗಂಡ ಹುಸೇನಪ್ಪ | ಸುರ್ವೇಶಿ | ೩೩ | ಖಾನಾಪೂರ | ೦೪.೧೨.೦೨ |
| ೧೭. ಸುಕಮುನಿ ತಂದೆ ಜಂಜೂರಿ | ಗೌಡ್ಕ | ೪೩ | ಶಾಹಪುರ | ೦೫.೧೨.೦೨ |
| ೧೮. ಕೃಷ್ಣಪ್ಪ ತಂದೆ ಹಣಮಂತ | ಪರದನವಾಡ್ | ೩೮ | ಶಾಹಪುರ | ೦೫.೧೨.೦೨ |
| ೧೯. ನೀಲರಾವ್ ತಂದೆ ಕೃಷ್ಣಪ್ಪ | ಬಂಡೋಡ್ | ೩೪ | ಚಿಂತಗುಂಟಾ | ೧೧.೧೨.೦೨ |
| ೨೦. ಪದ್ಮಾವತಿ ಗಂಡ ಲಚಮಣ್ಣಾ | ಪಚಮೆ | ೭೦ | ಗುರುಮಿಠಕಲ್ | ೧೦.೧೨.೦೨ |
| ೨೧. ವಿಶ್ವನಾಥ ತಂದೆ ಲಚಮಣ್ಣಾ | ಕಬಸ್ತೋಡ್ | ೩೪ | ಹತ್ತಿಕುಣಿ | ೦೯.೧೨.೦೨ |
| ೨೨. ರಾಮಚಂದ್ರಪ್ಪ ತಂದೆ ನರಸಪ್ಪ | ಬಂಜೋಡ್ | ೫೫ | ಮುಂಡರಗಿ | ೧೦.೧೨.೦೨ |
| ೨೩. ಲಕ್ಷ್ಮಿ ಗಂಡ ಕಾಶಿನಾಥ | ಬಂಜೋಡ್ | ೨೧ | ರಾಮಸಮುದ್ರ | ೧೦.೧೨.೦೨ |

## "ಗುಲ್ಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ"




ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ - ಹಂಪಿ
ವಿದ್ಯಾರಣ್ಯ - 583 276.

ಪ್ರಶ್ನಾವಳಿ

ಜಿಲ್ಲೆ : ......................

### I ಸಾಮಾನ್ಯ ಮಾಹಿತಿ

ಅ) ಸಮೀಕ್ಷೆಯ ದಿನಾಂಕ :
ಆ) ಬುಡಕಟ್ಟು / ಜಾತಿ :
ಇ) ಮಾತೃಭಾಷೆ :
ಈ) ಮನೆದೇವರು :
ಉ) ಗೋತ್ರ/ಬೆಡಗು/ಬಳಿ :
ಊ) ಮನೆತನದ ಹೆಸರು :

ಋ) ವಾಸಸ್ಥಾನ :
ೠ) ಹೋಬಳಿ :
ಎ) ತಾಲೂಕು :
ಏ) ಭೂ ಹಿಡುವಳಿ(ಎಕರೆಗಳಲ್ಲಿ)
ಗ) ಒಣ :
ತ) ನೀರಾವರಿ :

### II ವೈಯಕ್ತಿಕ ಮಾಹಿತಿ

| ಕ್ರ. ಸಂ | ಕುಟುಂಬದ ಸದಸ್ಯರ ಹೆಸರುಗಳು | ಸಂಬಂಧ | ಲಿಂಗ | ವಯಸ್ಸು | ವೈವಾಹಿಕ ಸ್ಥಾನಮಾನ | ವಿವಾಹಿತಳ ಬೆಡಗು/ಜಾತಿ | ಶೈಕ್ಷಣಿಕ ಮಟ್ಟ | ಕಸುಬು | ಕುಟುಂಬ ಯೋಜನೆ (✓) | ಸರಕಾರಿ ಸೌಲಭ್ಯಗಳು (✓) | | | |
|---|---|---|---|---|---|---|---|---|---|---|---|---|---|
| | | | | | | | | | | ವಿಧವಾ | ಅಂಗವಿಕಲ | ವೃದ್ಧಾಪ್ಯ | ಶಿಷ್ಯವೇತನ |
| 01 | 02 | 03 | 04 | 05 | 06 | 07 | 08 | 09 | 10 | 11 | 12 | 13 | 14 |
| 0 1 | | ಮುಖ್ಯಸ್ಥ/ಳು | | | | | | | | | | | |
| 0 2 | | | | | | | | | | | | | |
| 0 3 | | | | | | | | | | | | | |
| 0 4 | | | | | | | | | | | | | |
| 0 5 | | | | | | | | | | | | | |
| 0 6 | | | | | | | | | | | | | |
| 0 7 | | | | | | | | | | | | | |
| 0 8 | | | | | | | | | | | | | |
| 0 9 | | | | | | | | | | | | | |
| 1 0 | | | | | | | | | | | | | |
| 1 1 | | | | | | | | | | | | | |
| 1 2 | | | | | | | | | | | | | |
| 1 3 | | | | | | | | | | | | | |
| 1 4 | | | | | | | | | | | | | |

ಐ) ಪಶು ಸಂಪತ್ತು (ಸಂಖ್ಯೆಗಳಲ್ಲಿ)
01) ಎತ್ತು :
02) ಹೋರಿ :
03) ಎಮ್ಮೆ :
04) ಆಕಳು :
05) ಕುರಿ :
06) ಮೇಕೆ :
07) ಕೋಳಿ :
08)

ಒ) ಮನೆ ಮಾದರಿ ✓
01) ಗುಡಾರ ☐
02) ಗುಡಿಸಲು ☐
03) ಟಿನ್ ಮನೆ ☐
04) ಧಾಬಾ (ಮಾಳಿಗೆ) ☐
05) ಆರ್.ಸಿ.ಸಿ. ಮನೆ ☐
06) ಹೆಂಚಿನ ಮನೆ ☐
07) ಜನತಾ ಆಶ್ರಯ
08) ಬಾಡಿಗೆ ಮನೆ
09)
10) ನಿವೇಶನ (ಸ್ವ ☐/ಸ* ☐)
11) ಮನೆ (ಸ್ವ ☐/ಸ* ☐)

ಓ) ಸೌಲಭ್ಯಗಳು ✓
01) ಪಡಿತರ ಚೀಟಿ ☐
02) ವಿದ್ಯುತ್ ದೀಪ (ಸ್ವ ☐/ಸ*
03) ಬಂಡಿ ☐
04) ಸೈಕಲ್ ☐
05) ಸ್ಕೂಟರ್ ☐
06) ಆಟೋ ರಿಕ್ಷಾ ☐
07) ರಿಕ್ಷಾ ☐
08) ಜೀಪ್ ☐
09) ಕಾರು ☐
10) ಟ್ರ್ಯಾಕ್ಟರ್ ☐
11) ಲಾರಿ ☐
12) ರೇಡಿಯೊ ☐
13) ಟೇಪ್ ರಿಕಾರ್ಡರ್ ☐
14) ಟಿ.ವಿ. ☐
15) ವಿ.ಸಿ.ಆರ್ ☐
16) ವಿ.ಸಿ.ಪಿ ☐
17) ಟೆಲಿಫೋನ್ ☐
18) ಕಂಪ್ಯೂಟರ್ ☐
19) ಫ್ರಿಜ್ ☐
20) ವಾಶಿಂಗ್ ಮಿಶಿನ್ ☐
21) ಶೌಚಾಲಯ ☐
22) ಸ್ನಾನಗೃಹ ☐
23) ಗ್ಯಾಸ್ ☐
24) ನಲ್ಲಿ ☐
25)

ಡಾ ಕೆ ಎಂ ಮೈತ್ರಿ
ಯೋಜನೆಯ ನಿರ್ದೇಶಕರು ಹಾಗೂ ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ - 583 276, ದೂರವಾಣಿ : 08394 - 41820 (R)

ಶ್ರೀ ಬಸವರಾಜ ಎಸ್ ಹಿರೇಮಠ
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ

ಸಮೀಕ್ಷೆದಾರರ ಹೆಸರು ಮತ್ತು ಸಹಿ

ಸ್ವ : ಸ್ವಂತದ್ದು ಸ* : ಸರಕಾರದ್ದು



೨.೧ ಗುಲ್ಬರ್ಗಾ ನಗರದ ಬೈಲುಪತ್ತಾರರು



೨.೧ ಗುಲ್ಬರ್ಗಾ ನಗರದ ಬೈಲುಪತ್ತಾರರ ಕುಟುಂಬ



೩.೨ ಗುಲ್ಬರ್ಗಾ ನಗರದ ಬೈಲುಪತ್ತಾರರ ಮಹಿಳೆಯರು ಮತ್ತು ಮಕ್ಕಳು



೩.೩ ಶಾಹಾಪೂರ ತಾಲೂಕಿನ ಖಾನಾಪುರ ಗ್ರಾಮದ
ವೃತ್ತಿ ನಿರತ ಬೈಲುಪತ್ತಾರರ ಮಹಿಳೆ



೩.೪ ಹಂದ್ರಿಕಿ ಬೀರಲಿಂಗನ ಜಾತ್ರೆಯಲ್ಲಿ ಆಭರಣಗಳನ್ನು
ಮಾರಾಟ ಮಾಡುತ್ತಿರುವ ಬೈಲತ್ತಾರರು



೩.೫ ಯಾದಗಿರಿ ರೈಲ್ವೇ ನಿಲ್ದಾಣದಲ್ಲಿ ಆಭರಣಗಳು
ಮಾರಾಟ ಮಾಡುತ್ತಿರುವ ಬೈಲುಪತ್ತಾರರ ಮಕ್ಕಳು



೪.೧ ಕೌದಿಯ ತೊಟ್ಟಿಲಲ್ಲಿ ಬೈಲುಪತ್ತಾರರ ಮಗು ಗುಲ್ಬರ್ಗಾ ನಗರ



೪.೨ ಗುಡಾರದಲ್ಲಿ ಬೈಲುಪತ್ತಾರರ ಮಧುಮಕ್ಕಳು ಕುಳಿತಿರುವುದು



೪.೩ ಗುಲ್ಬರ್ಗಾ ನಗರದಲ್ಲಿ ಎಲ್ಲಮ್ಮನ ಹಡಿಗಿಲು
ತುಂಬುತ್ತಿರುವ ಬೈಲು ಪತ್ತಾರ ಮಹಿಳೆಯರು



೪.೪ ಗುಲ್ಬರ್ಗಾ ನಗರದ ಬೈಲುಪತ್ತಾರರ ದೈವಾರಾಧಾನೆ



೬.೧ ಯಾದಗಿರಿ ಬೈಲುಪತ್ತಾರರ ಅಡುಗೆ ಮನೆ ಆವರಣ



೬.೨ ಬಟ್ಟೆಗಳನ್ನು ಸ್ವಚ್ಛಗೊಳಿಸುತ್ತಿರುವ ಬೈಲುಪತ್ತಾರರ
ಯುವತಿ ಗುಲ್ಬರ್ಗಾ ನಗರ



೬.೩ ಗುಲ್ಬರ್ಗಾ ನಗರದಲ್ಲಿ ಕಾಗದ ಆರಿಸುತ್ತಿರುವ ಬೈಲುಪತ್ತಾರ ಮಕ್ಕಳು



೬.೪ ಗುಲ್ಬರ್ಗಾ ವ್ಯಾಪ್ತಿಯ ಬೈಲುಪತ್ತಾರ ಸಮುದಾಯದಲ್ಲಿ
ಬಿ.ಎಡ್. ಪದವಿ ಮುಗಿಸಿದ ವೃತ್ತಿನಿರತ ನಿರುದ್ಯೋಗಿ ಪದವಿಧರ

